ವಿಶ್ವಕರ್ಮಹಿತೈಷಿಣೀ ಗ್ರಂಥ

ಸಮಸ್ತದೇವತಾದೇವಾಲಯಾದೀನಾಂ

# ಪ್ರತಿಷ್ಠಾವಿಧಿಃ

(ಕಾಶ್ಯಪ ಶಿಲ್ಪೋಕ್ತಃ)

ಮ. ಗಂಗಾಧರಮೂರ್ತಿನಾ
ಸಂಪಾದಿತಃ

# ಪ್ರಸ್ತಾವನೆ

ಆದ್ಯ ಶಿಲ್ಪಿಗಳಾದ ಕಶ್ಯಪ ಬ್ರಹ್ಮರ್ಷಿಗಳಿಂದ ಲೋಕಕ್ಕೆ ಅನುಗ್ರಹಿಸಲ್ಪಟ್ಟ ಶಿಲ್ಪಶಾಸ್ತ್ರಕ್ಕೆ ಕಾಶ್ಯಪಶಿಲ್ಪವೆಂಬುದಾಗಿ ಹೆಸರಿರುತ್ತದೆ. ವೇದಗಳಲ್ಲಿ ಹೇಳಲ್ಪಟ್ಟಿರುವಂತೆ ಶಿಲ್ಪಶಾಸ್ತ್ರಕ್ಕೆ ಆದ್ಯಪ್ರವರ್ತಕರಾದವರು ಭಗವಾನ್ ಭೌವನಮಹರ್ಷಿಗಳೆಂಬುದಾಗಿಯೂ, ಅವರ ಪ್ರಧಾನ ಶಿಷ್ಯರೆನಿಸಿ ಪ್ರಪ್ರಥಮ ಶಿಲ್ಪರಚನೆ ಮಾಡಿದವರು ಶಿಲ್ಪಃ ಕಶ್ಯಪರೆಂಬುದಾಗಿಯೂ ತಿಳಿದುಬರುತ್ತದೆ. ಈ ಶಿಲ್ಪಃ ಕಶ್ಯಪರಿಂದ ಉಪದೇಷ್ಟರಾದ ನಾಭಾನೇದಿಷ್ಟರು ಸೌಧನ್ವಾಋಭುಗಳು ಆಂಗಿರಸರು ಅಶ್ವಿನೀಕುಮಾರರು ಆಭೂತಿಸ್ತ್ವಾಷ್ಟ್ರರು ಮೊದಲಾದ ಶಿಲ್ಪಿಗಳೂ ಅನೇಕಾನೇಕ ಶಿಲ್ಪಶಾಸ್ತ್ರಗಳನ್ನು ರಚಿಸಿರುತ್ತಾರೆ. ಇವರುಗಳೂ ಇವರುಗಳ ಶಿಷ್ಯರೂ ತಮ್ಮ ತಮ್ಮ ಶಾಸ್ತ್ರಾನುಭವಜನ್ಯ ಜ್ಞಾನವನ್ನು ನಾನಾ ಶಿಲ್ಪಶಾಸ್ತ್ರಗಳ ಮೂಲಕ ಹರಡಿ ಲೋಕವನ್ನು ಉದ್ಧರಿಸಿರುತ್ತಾರೆ. ಹೀಗೆ ಶಿಲ್ಪಶಾಸ್ತ್ರಗಳು ಮೊದಲು ೩೫ ಎಂಬುದಾಗಿಯೂ ಅನಂತರ ೧೦೫ ಎಂಬುದಾಗಿಯೂ ಅನಂತರ ಬೆಳೆದುವುಗಳು ಅಸಂಖ್ಯಾಕಗಳಾಗಿ ಅನಂತಾನಂತವೆಂಬುದಾಗಿಯೂ ತಿಳಿಯಲ್ಪಟ್ಟಿದೆ. ಈ ಶಿಲ್ಪಶಾಸ್ತ್ರಗಳು ಗೃಹ, ಪ್ರಾಸಾದ, ಪ್ರಾಕಾರ, ಉದ್ಯಾನ, ನಗರ, ಮೂರ್ತಿಗಳು, ಆಭರಣಗಳು, ಕೃಷಿ, ಯಂತ್ರ, ಆಯುಧ, ನೌಕಾ, ರಥ, ವಿದ್ಯುತ್, ಪಾತ್ರೆಗಳು, ವಿಮಾನಗಳು, ಬಂದರುಗಳು, ವಿಮಾನಸ್ಥಾನಗಳು ಇತ್ಯಾದಿ ವಿವಿಧ ವಿಷಯಗಳನ್ನು ಅಧಿಕರಿಸಿ ವಿವರಿಸುತ್ತಿದ್ದುವಲ್ಲದೆ, ಮಾನಸಿಕ ಬೆಳೆವಣಿಗೆ, ಮಾನವ ವಿಚಾರ ಪ್ರಚೋದನೆ, ದೇಶದ ಜನತೆಯ ಸತ್ವಗುಣಾಭಿವರ್ಧನೆ, ಮುಂತಾದುವುಗಳನ್ನೂ ಒಳಗೊಂಡು, ಜನತಾ ವಿಕಾಸಕ್ಕೂ ನಾಗರಕತಾಭಿವೃದ್ಧಿಗೂ ಬಹುಮುಖವಾಗಿ ಸಹಾಯ ಮಾಡಿತ್ತೆಂಬುದೂ ವೇದಗಳಿಂದ ತಿಳಿದುಬರುತ್ತಿದೆ. ಆದರೆ ಈ ಬಹುಮುಖವಾದ ಶಿಲ್ಪಶಾಸ್ತ್ರದಲ್ಲಿ ಅನೇಕವು ಈಗ ಉಪಲಬ್ಧವಿಲ್ಲ. ಅನೇಕವೇನು ಬಹುತೇಕ ಎಲ್ಲವೂ ಸಾಮಾನ್ಯವಾಗಿ ಲುಪ್ತಪ್ರಾಯವಾಗಿವೆಯೆಂದೇ ಹೇಳಬಹುದು. ಆದರೆ ಈಗ ಉಪಲಬ್ಧವಿರುವ ಶಿಲ್ಪಶಾಸ್ತ್ರಗಳಲ್ಲಿ ಕೇವಲ ಗೃಹನಿರ್ಮಾಣ ಮೂರ್ತಿನಿರ್ಮಾಣ ಅದರಲ್ಲೂ ದೇವತಾಮೂರ್ತಿನಿರ್ಮಾಣ ದೇವಾಲಯರಚನಾ ಅವುಗಳಿಗೆ ಆವಶ್ಯಕವಾದ ಕಾಲ ಪ್ರಮಾಣಗಳು ಅವುಗಳ ಪ್ರತಿಷ್ಠಾ ಪೂಜಾವಿಧಾನಗಳೂ ಮಾತ್ರ ಹೇಳಲ್ಪಟ್ಟಿರುವುವೇ ಹೆಚ್ಚಾಗಿರುತ್ತದೆ. ಈಗ ಉಪಲಬ್ಧವಿರುವ ಕಾಶ್ಯಪಶಿಲ್ಪವೂ ಕೂಡ ಕೇವಲ ದೇವತಾಮೂರ್ತಿ ನಿರ್ಮಾಣಾದಿಗಳ ವಿಚಾರಕ್ಕೆ ಹೆಚ್ಚು ಲಕ್ಷ್ಯಕೊಟ್ಟಿರುವಂತೆ ಕಂಡುಬರುತ್ತಿದೆಯೇ ಪರಂತು ವೇದಗಳಲ್ಲಿ ಹೇಳಲ್ಪಟ್ಟಿರವ ಯಾವ ಶಿಲ್ಪಃ ಕಶ್ಯಪರಿಂದ ಉಕ್ತವಾದ ಮಹೋನ್ನತ ಶಿಲ್ಪವಿದೆಯೋ ಅದರ ಅಲ್ಪ ಮಾತ್ರ ಜ್ಞಾನವೂ ಇದರಲ್ಲಿ ಕಂಡುಬರುವುದಿಲ್ಲ. ಆದುದರಿಂದ ಈಗ ಉಪಲಬ್ಧ

ವಾಗಿರುವ ಕಾಶ್ಯಪಶಿಲ್ಪವು ಕೇವಲ ಇತ್ತೀಚೆಗೆ ರಚಿಸಲ್ಪಟ್ಟಿದೆಯೆಂದು ನಿರ್ವಿವಾದ ವಾಗಿ ನಿರ್ಣಯಿಸಬಹುದು. ಆದರೆ ಆ ವೇದಗಳಲ್ಲಿ ಉಕ್ತವಾಗಿರುವ ಮಹೋನ್ನತ ಶಿಲ್ಪವಾದರೋ ಯಾವ ಪ್ರಪ್ರಥಮ ಶಿಲ್ಪಿಗಳು ಜಗತ್ಸೃಷ್ಟಿರಚನಾ ವೈಚಿತ್ರ್ಯವನ್ನೇ ಮೊಟ್ಟಮೊದಲು ತಮ್ಮ ತಪೋನುಷ್ಠಾನದಿಂದ ಅರಿತು, ಯಾವ ಒಂದು ದೈವಿಕ ನಿಯಮದಿಂದ ಸ್ವಯಮೇವ ಜಗತ್ಸೃಷ್ಟಿಯು ನಡೆದುಬರುತ್ತಿರುವುದೋ ಆ ನಿಯಮಕ್ರಮದ ಆಧಾರದ ಮೇಲೆ ಶಿಲ್ಪರಚನೆಯನ್ನು ಹೇಗೆ ನಿರ್ಮಿಸಬಹುದು ಎಂದು ತೋರಿಸಿರುವರೋ ಆ ಅಲೌಕಿಕ ಶಿಲ್ಪಜ್ಞಾನವನ್ನು ನಮ್ಮ ದೃಷ್ಟಿಪಥಕ್ಕೆ ತಂದು ನಿಲ್ಲಿಸುತ್ತದೆ. ಹೀಗೆ ವೇದಗಳಲ್ಲಿ ಉಕ್ತವಾಗಿರುವ ಶಿಲ್ಪದ ಜ್ಞಾನಕ್ಕೂ, ವೇದ ಕಾಲಾನಂತರ ರಚಿತಗಳಾದ ಪ್ರಾಚೀನ ಶಿಲ್ಪಶಾಸ್ತ್ರಗಳ ಜ್ಞಾನಕ್ಕೂ, ಇತ್ತೀಚೆಗೆ ರಚಿಸಲ್ಪಟ್ಟಿರುವ ಆಧುನಿಕ ಶಿಲ್ಪಶಾಸ್ತ್ರಗಳ ಜ್ಞಾನಕ್ಕೂ ಅಣು ಪರ್ವತಾಂತರ ವ್ಯತ್ಯಾಸವು ಇರುತ್ತದೆ. ಆಧುನಿಕ ಶಿಲ್ಪಶಾಸ್ತ್ರಗಳನ್ನೇ ಆಧಾರವಾಗಿಟ್ಟುಕೊಂಡು ಹೊರಟ ಶಾಸ್ತ್ರಗಳೂ, ಪುರಾಣಗಳೂ, ಲೇಖನಗಳೂ ಸರ್ವವ್ಯಾಪಿಯಾದ ಶಿಲ್ಪಕ್ಕೆ ಕೇವಲ ಸಾಮಾನ್ಯ ಗೌಣಸ್ಥಾನವನ್ನು ಕೊಟ್ಟು, ಅದರ ಅರ್ಥವನ್ನು ಅತ್ಯಂತ ಕೆಳ ಮಟ್ಟದಲ್ಲಿ ವಿವರಿಸಿ ಜನತೆಗೆ ಶಿಲ್ಪಶಾಸ್ತ್ರವೆಂದರೆ ಕೇವಲ ಅದೊಂದು ಅಲ್ಪಶಾಸ್ತ್ರವೆಂದೂ ಹೀನಶಾಸ್ತ್ರವೆಂತಲೂ ತಿಳಿಯುವಂತೆ ಮಾಡಿರುತ್ತವೆ. ಶಿಲ್ಪದ ನಿಜವಾದ ಅರ್ಥವನ್ನೂ ಅದರ ಮಹೋನ್ನತ ಸ್ಥಾನವನ್ನೂ ತಿಳಿಯಬೇಕಾದರೆ ವೇದಗಳನ್ನೇ ನೋಡಬೇಕು. ಆದರೆ ವೇದಗಳನ್ನು ವ್ಯಾಖ್ಯಾನಿಸಿರುವ ಭಾಷ್ಯಕಾರರೆಲ್ಲರೂ ದುಃಖನಿವೃತ್ತಿರೂಪ ಸುಖಸಾಧನಾ ಪ್ರಯತ್ನರೂಪ ಮೋಕ್ಷಜ್ಞಾನವನ್ನು ವಿವರಿಸುವುದರಲ್ಲಿಯೇ ವೇದಗಳ ಪ್ರಾಧಾನ್ಯತೆ ಇದೆ ಎಂದು ನಿರ್ಣಯಿಸಿರುವುದರಿಂದ ವೇದಗಳಲ್ಲಿ ಅದೊಂದು ಮೋಕ್ಷಜ್ಞಾನ ವಿನಾ ಮತ್ತಾವುದೂ ಹೇಳಲ್ಪಟ್ಟಿರುವುದೇ ಇಲ್ಲವೆಂದು ಅಜ್ಞಜನತೆಯೇ ಅಲ್ಲದೆ ವಿಚಾರವಂತರಾದ ವಿದ್ವಾಂಸರೂ ತಿಳಿಯುವಂತಾಗಿದೆ. ನಿಜವಾಗಿ ಮೋಕ್ಷಜ್ಞಾನವನ್ನು ವಿವರಿಸಿರುವುವು ವೇದಾಂತಶಾಸ್ತ್ರಗಳೆನಿಸಿದ ಉಪನಿಷತ್ತುಗಳು ಎಂಬುದು ಉಪನಿಷಚ್ಛಬ್ದಾರ್ಥ ವಿವರಣೆಯಿಂದಲೂ ಅವುಗಳಲ್ಲಿ ಹೇಳಲ್ಪಟ್ಟಿರುವ ವಿಚಾರಸರಣಿಯಿಂದಲೂ ನಿರ್ಣಯಿಸಬಹುದಾಗಿದೆ. ವೇದಗಳು, ವೇದಾಂತ ಎಂಬ ವೇದಗಳ ಕೊನೆಯ ಭಾಗವನ್ನು ಅನುಲಕ್ಷಿಸಿರುವ ಮೋಕ್ಷಜ್ಞಾನಕ್ಕೆ ಮೂಲವಾದ, ಮತ್ತು ಕೇವಲ ಮೋಕ್ಷಜ್ಞಾನವೊಂದೇ ಅಲ್ಲದೆ ಸರ್ವವಿಧ ಜ್ಞಾನಕ್ಕೂ ಮೂಲವಾದ, ಯಾವುದೋ ಒಂದು ಮಹತ್ತರ ವಿಷಯವನ್ನು ಹೇಳುತ್ತಿರಬೇಕೆಂಬುದು ವೇದ ವೇದಾಂತ ಎಂಬ ಎರಡು ಶಬ್ದಾರ್ಥಗಳನ್ನು ತಿಳಿಯುವುದರಿಂದಲೇ ಸ್ಪಷ್ಟವಾಗಿ ತಿಳಿಯಬಹುದು. ಇದರಿಂದ ವೇದವೆಂಬುದು ಸಕಲ ಜ್ಞಾನಕ್ಕೂ ಮೂಲವಾದ ಶಿಲ್ಪ, ಅದರ ಸಾಧನೆ, ಅದರ ಬೆಳೆವಣಿಗೆ, ಅದರ ಮಹೋನ್ನತ ಅರ್ಥ, ಅದರ ಲೋಕ ಪ್ರಯೋಜನ, ಅದರಿಂದ ಹೊರಟ ಅನೇಕಾನೇಕ ಜ್ಞಾನತರಂಗಗಳು, ಅವುಗಳ ಮೂಲಕ ಅಖಿಲ ವಿಶ್ವವನ್ನೇ ವ್ಯಾಪಿಸಿರುವ

ಅದರ ಕರ್ಮ ಸಾಮರ್ಥ್ಯ, ಈ ಎಲ್ಲ ಬೆಳೆವಣಿಗೆಗೂ ಆಧಾರವಾದ ಅದರ ಕ್ರಮ ನಿಯಮ, ಈ ಎಲ್ಲಕ್ಕೂ ಕೇಂದ್ರೀಕೃತವಾದ ಆ ಹೃತ್ಸ್ಥಾನ, ಅದರಲ್ಲಿರುವ ಸರ್ವ ಚೈತನ್ಯ ಮೂಲ ವಿಶ್ವಕರ್ಮ ಭಗವದ್ದರ್ಶನ ಈ ಮಹದ್ವಿಷಯಗಳನ್ನು ವಿವರಿಸುವುದರಲ್ಲಿಯೇ ಆ ವೇದದ ಪ್ರಾಧಾನ್ಯತೆ ನಿಜವಾಗಿಯೂ ಇರುತ್ತದೆ. ಆದುದರಿಂದ ವೇದಗಳಲ್ಲಿ ಈ ಶಿಲ್ಪವು ಯಾವ ರೀತಿ ವಿವರಿಸಲ್ಪಟ್ಟಿದೆಯೆಂಬುವನ್ನು ವಿಮರ್ಶಿಸೋಣ.

## ಶಿಲ್ಪವೂ, ವೇದವೂ

'ಸಕಲ ಪ್ರಾಣಿಗಳಲ್ಲಿಯೂ ಮನುಷ್ಯನು ಜ್ಞಾನಯುಕ್ತನಾದುದರಿಂದ ತನ್ನ ಜ್ಞಾನದ ಪ್ರಭಾವದಿಂದ ತನ್ನ ಉಪಯೋಗಕ್ಕೆ ಅನುಗುಣವಾದ ವಸ್ತುಗಳನ್ನು ನಿರ್ಮಾಣಮಾಡಲು ಉಪಕ್ರಮಿಸಿದನು. ಆ ವಸ್ತುನಿರ್ಮಾಣವು ಶಿಲ್ಪವೆನ್ನಿಸಿಕೊಳ್ಳುತ್ತದೆ. ಆದುದರಿಂದ ಶಿಲ್ಪವು ಮಾನವಜಾತಿಯು ಈ ಜಗತ್ತಿನಲ್ಲಿ ಉತ್ಪನ್ನವಾದ ಕಾಲದಲ್ಲಿಯೇ ಜನ್ಮತಾಳಿದೆ' ಎಂದು ಮಹಾ ಮಹಾ ವಿದ್ವಾಂಸರುಗಳು ಅಭಿಪ್ರಾಯಪಟ್ಟಿರುತ್ತಾರೆ. ಸತ್ಯಕ್ಕೆ ಇದು ಸಮೀಪವಾದರೂ ಸತ್ಯ ಸಂಗತಿ ಇದಲ್ಲ. ಜಗತ್ತಿನ ಮಾನವ ಜನ್ಮೋತ್ಪತ್ತಿಗಿಂತ ಹಿಂದಿನ ಪ್ರಾಣ್ಯುತ್ಪತ್ತಿ, ಅದಕ್ಕೂ ಹಿಂದಿನ ಪಂಚಭೂತೋತ್ಪತ್ತಿ, ಅದಕ್ಕೂ ಬಹಳ ಹಿಂದೆ ಎಂದರೆ ಜಗತ್ಸೃಷ್ಟಿಗೆ ಯಾವಾಗ ಮೊದಲಾಯಿತೋ ಆಗಲೇ ಶಿಲ್ಪವು ಜನ್ಮತಾಳಿದೆಯೆಂದು ವೇದವು ಘಂಟಾಘೋಷವಾಗಿ ಸಾರಿದೆ. ಜಗತ್ಸೃಷ್ಟಿಯೆಂದರೇ ಶಿಲ್ಪ. ಮಾನವನು ಜ್ಞಾನಯುಕ್ತನಾದುದರಿಂದ ವಸ್ತು ನಿರ್ಮಾಣವನ್ನು ಮಾಡಲು ಉಪಕ್ರಮಿಸುವನು ಹೇಗೋ ಹಾಗೆ ಅವನು ಜ್ಞಾನಯುಕ್ತನಾಗುವುದಕ್ಕೂ ಹಾಗೂ ಉತ್ತಮನೆನಿಸುವುದಕ್ಕೂ ಶಿಲ್ಪವೇ ಮುಖ್ಯ ಕಾರಣ. ಜ್ಞಾನವೆಂದರೆ ಶಿಲ್ಪದ ಒಂದುರೂಪ. ಜಗತ್ಸೃಷ್ಟಿಯು ಶಿಲ್ಪ ಕ್ರಮವಾಗಿ ಅಭಿವೃದ್ಧಿಗೊಂಡು ಬಂದುದರಿಂದಲೇ ಸೃಷ್ಟಿಯಲ್ಲಿ ಮಹಾಭೂತಗಳೂ, ಸಸ್ಯಗಳೂ, ಪ್ರಾಣಿಗಳೂ, ಮನುಷ್ಯನೂ ಕ್ರಮವಾಗಿ ಜನ್ಮತಾಳಿದರು. ಆ ಶಿಲ್ಪ ಕ್ರಮದಂತೆಯೇ ಮನುಷ್ಯನು ಜ್ಞಾನಿಯಾಗಿ ವಿಶ್ವರಹಸ್ಯವನ್ನು ಅರ್ಥಾತ್ ಆ ಶಿಲ್ಪವನ್ನು ಭೇದಿಸಿ ತಿಳಿದುಕೊಂಡು ವಸ್ತು ನಿರ್ಮಾಣಮಾಡಿ, ಸಮಸ್ತ ಜಗತ್ತನ್ನೂ ತನ್ನಧೀನಪಡಿಸಿಕೊಂಡು, ತನ್ನನ್ನು ತಾನು ತಿಳಿದು, ತನ್ನನ್ನೇ ಗೆದ್ದು, ಸರ್ವೋತ್ತಮನಾಗಿದ್ದಾನೆ. ಇಂದು ಮಾನವನು ಸರ್ವೋತ್ತಮನೆನಿಸಲು ಆತನಿಗೆ ಆ ವಿಶ್ವ ಶಿಲ್ಪವು ಸಾಕ್ಷಾತ್ಕಾರವಾಗಲು ಎಂತಹ ಸಾಧನೆಯನ್ನು ಆತನು ಕೈಗೊಂಡನು, ಎಂತಹ ತಪಸ್ಸನ್ನಾಚರಿಸಿದನು ಎಂಬುದು ಜ್ಞಾನದ ಇತಿಹಾಸದಲ್ಲಿಯೇ ಒಂದು ರೋಮಾಂಚನಕಾರಿಯಾದ ಪ್ರಕರಣವಾಗಿದೆ.

ಆ ವಿಶ್ವಶಿಲ್ಪವನ್ನು ಅರಿಯಲು ಪ್ರಾಚೀನ ಕಾಲದ ಮಹಾಋಷಿವರ್ಯರುಗಳು ಮೊದಲು ಸಕಲ ಜಗತ್ತಿನ ಮೂಲಕಾರಣವನ್ನೂ ಆ ಕಾರಣವಸ್ತುವನ್ನೂ

ತಿಳಿಯಲು ಪ್ರಯತ್ನಿಸಿ « ಕಿಗ್ಂಸ್ವಿದಾಸೀತ್ ಅಧಿಷ್ಠಾನಂ ಆರಂಭಣಂ ಕತ ಮತ್ಸ್ವಿತ್ ಕಿಮಾಸೀತ್" — ಯಜುಃ ೪-೬-೨. ಆದಿಯಲ್ಲಿ ಜಗತ್ತು ಏನಾಗಿತ್ತು? ಹೇಗಿತ್ತು? ಕಾರಣಪುರುಷನಾರು? ಎಂದು ಪ್ರಶ್ನಿಸಿ, ತಮ್ಮ ಸಂಶೋಧನಾ ತಪೋನುಷ್ಠಾನ ಬಲದಿಂದ ಪ್ರಪಂಚವೆಲ್ಲವನ್ನೂ ವಿಭಜಿಸಿ, ಪಂಚಮಹಾಭೂತಗಳನ್ನು ಶೋಧಿಸಿ, ಪೃಥಕ್ಕರಿಸಿ, ಕೊನೆಗೆ ಅಂತರ್ಮುಖರಾಗಿ, ಪ್ರಾಣ ಇಂದ್ರಿಯ ಮನಸ್ಸು ಬುದ್ಧಿ ಇವೆಲ್ಲವನ್ನೂ ನೇತಿ ನೇತಿ ಇದಲ್ಲ ಇದಲ್ಲ ಎಂದು ಅಲ್ಲಗಳೆದು, ಏತಸ್ಮಾತ್ಪರಮಸ್ತಿ — ಬೃ. ಉ. ೩-೬. ಅದಕ್ಕೂ ಆಚೆಗೆ ಹೃನ್ಮಧ್ಯದಲ್ಲಿ ಮನೀಷಿಣೋ ಮನಸಾ ಪೃಚ್ಛತ ಇದುತದ್ಯದಧ್ಯತಿಷ್ಠದ್ಭುವನಾನಿ ಧಾರಯನ್ — ಯಜುಃ ೪-೬-೨. ಸಕಲ ಜಗತ್ತನ್ನೂ ಧಾರಣ ಮಾಡಿರುವ ತ್ರಿಗುಣಾತೀತವಾದ ಅತೀಂದ್ರಿಯವಾದ ಪರತತ್ವವನ್ನು ಸ್ವಾನುಭವಪೂರ್ವಕ ಅರಿತು, ಅದರಲ್ಲಿ ಬೆರೆತು, ಆನಂದ ಪೂರ್ಣರಾಗಿ, ಆ ತತ್ವಜ್ಞಾನಸಿದ್ಧಿಯ ಪರಮ ದೃಷ್ಟಿಯಿಂದ ಜಗತ್ತಿನಲ್ಲೆಲ್ಲೆಲ್ಲಿಯೂ ಆ ಪರತತ್ವವೇ ತುಂಬಿರುವುದನ್ನು ನೋಡಿ ಅಧಸ್ವಿದಾಸೀದುಪರಿಸ್ವಿದಾಸೀತ್, ಸ್ವಧಾಅವಸ್ತಾತ್ ಪ್ರಯತಿಃ ಪರಸ್ತಾತ್ — ಋಕ್ ೧೪-೨೧. ಕೆಳಗೆ ಇದೆ, ಮೇಲೆ ಇದೆ, ಅಲ್ಲಿ ಇದೆ, ಇಲ್ಲಿ ಇದೆ, ಎಲ್ಲೆಲ್ಲಿಯೂ ಇದೆ, ಇಷ್ಟೇ ಅಲ್ಲ ಅತ್ಯತಿಷ್ಠದ್ದಶಾಂಗುಲಂ — ಋಕ್ ಪು. ಸೂ. ಎಲ್ಲವನ್ನೂ ಆಕ್ರಮಿಸಿ ತಾನೇ ತಾನಾಗಿ ಅದಕ್ಕೂ ಆಚೆಗೆ ಹರಡಿದೆ. ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಸ್ಪಾತ್ — ಯಜುಃ ೪-೬-೨ ಅಖಿಲ ವಿಶ್ವವೇ ಅದರ ಕಣ್ಣು ಮುಖ ಹಸ್ತ ಪಾದಗಳಾಗಿವೆ ಎಂಬುದಾಗಿ ಅನುಪಮ ರೀತಿಯಲ್ಲಿ ತತ್ವವನ್ನು ಸಾಕ್ಷಾತ್ಕರಿಸಿಕೊಂಡು ತಮ್ಮ ಈ ಅನುಭವವನ್ನು ಬೃಹದ್ಜ್ಞಾನ ಅರ್ಥಾತ್ ಬ್ರಹ್ಮಜ್ಞಾನ ಎಂದು ನಿರೂಪಿಸಿರುತ್ತಾರೆ.

ಈ ರೀತಿ ತ್ರಿಗುಣಾತೀತವಾದ ಅತೀಂದ್ರಿಯವಾದ ಆ ಪರತತ್ವದ ಸಾಕ್ಷಾತ್ಕಾರ ಹೊಂದಿದ ಋಷಿವರ್ಯರುಗಳು ಆ ನಿರ್ಗುಣ ನಿರಾಮಯ ತತ್ವವು ಯದೀ ಭೂಮಿಂಜನಯನ್ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾವಿಶ್ವಚಕ್ಷಾಃ|| ಯಜುಃ ೪-೬-೨. ಈ ಸಮಸ್ತ ಜಗತ್ತಿನ ಜನಕನೂ ನಿರ್ಮಾತೃವೂ ಕಾರಣರೂಪನೂ ಸಮಸ್ತ ಕಾರ್ಯಗಳಿಗೂ ಅಂತರ್ಯಾಮಿಯಾಗಿದ್ದು ಚೈತನ್ಯ ಕೊಡುವವನೂ ಸರ್ವಾರ್ಥತಃ ವಿಶ್ವಕರ್ಮ ಶಬ್ದವಾಚ್ಯನೇ ಸರಿಯೆಂದು ಸಿದ್ಧಾಂತೀಕರಿಸಿ, ಏಷದೇವೋ ವಿಶ್ವಕರ್ಮಾ ಮಹಾತ್ಮಾ ಸದಾ ಜನಾನಾಗ್ಂ ಹೃದಯೇ ಸನ್ನಿವಿಷ್ಟಃ — ಶ್ವೇತಾ. ಉಪ. ೪-೧೭. ಆ ವಿಶ್ವಕರ್ಮನು ಸಕಲ ಜನರಲ್ಲಿಯೂ (ಪ್ರಾಣಿ ವಸ್ತುಗಳಲ್ಲಿಯೂ) ಹೃದಯದೇಶದಲ್ಲಿ ಸದಾಕಾಲ ವಾಸಿಸುತ್ತಿರುತ್ತಾನೆ. ಹೃದಾಮನೀಷಾ ಮನಸಾಭಿಕ್ಲೃಪ್ತೋ ಯಏನಂ ವಿದುರಮೃತಾಸ್ತೇ ಭವಂತಿ — ಶ್ವೇತಾ. ಉಪ. ೪-೧೭. ಯಾರು ಆ ವಿಶ್ವಕರ್ಮಸರ್ವೇಶ್ವರನನ್ನು ತನ್ನಲ್ಲಿಯೇ ತಿಳಿಯುತ್ತಾರೋ ಅವರು ಅಂತ್ಯವಿಲ್ಲದ ಪೂರ್ಣತಮವಾದ ಅಮೃತತ್ವ

ವನ್ನು ಹೊಂದುತ್ತಾರೆ ಎಂದು ತಮ್ಮ ಆನಂದಾನುಭವವನ್ನು ಹಾಡಿ, ಆದಿಯಲ್ಲಿ ವಿಶ್ವಕರ್ಮನು ಈ ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಹೇಗೆ ಅಂತರ್ಭೂತನಾದನು ಎಂಬುದನ್ನು ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನಿಷ ಸಾದಾ ಪಿತಾನಃ। ಸಆಶಿಷಾ ದ್ರವಿಣಮಿಚ್ಛಮಾನಃ ಪರಮಚ್ಛದೋ ವರ ಆ ವಿವೇಶ— ಯಜುಃ. ೪-೬-೨ ವಿಶ್ವಕರ್ಮನು ಸೃಷ್ಟಿಗೆ ಪೂರ್ವದಲ್ಲಿ ಎಂದರೆ ಪ್ರಳಯಕಾಲದಲ್ಲಿ ಏನೊಂದೂ ಇಲ್ಲದಿದ್ದಾಗ ಎಲ್ಲ ಲೋಕಗಳನ್ನೂ—ಸಮಸ್ತ ಮಹಾಭೂತತತ್ವಗಳನ್ನೂ—ತನ್ನಲ್ಲಿ ಅಡಗಿಸಿಕೊಂಡವನಾಗಿದ್ದನು. ಹೀಗಿದ್ದರೂ ಆತನಿಗೆ ಸರ್ವಸೃಷ್ಟಿಕರ್ತೃತ್ವ ಸರ್ವಸಂಹಾರಕರ್ತತ್ವ ಸರ್ವಪೋಷಣಕರ್ತತ್ವಗಳೂ ಇದ್ದು, ಎಲ್ಲಾಕಾಲದಲ್ಲಿಯೂ ಎಲ್ಲವನ್ನೂ ತಿಳಿಯುವ ಅತೀಂದ್ರಿಯದ್ರಷ್ಟನೂ ಆತನೇ ಆಗಿರುತ್ತಾನೆ. ತನ್ನ ಸಂಕಲ್ಪದಂತೆ ಇಚ್ಛಾಮಾತ್ರದಿಂದ ಈ ಜಗತ್ತನ್ನು ಕ್ರಮವಾಗಿ ಸೃಷ್ಟಿಸಿ, ತನ್ನ ಸ್ವರೂಪ ಚೈತನ್ಯದಿಂದಲೇ ಸರ್ವ ಶರೀರಗಳ ಹೃನ್ಮಧ್ಯ ಸ್ಥಾನದಲ್ಲಿ ವಾಸಿಸುತ್ತಾ ಎಲ್ಲವನ್ನೂ ಬೆಳಗುತ್ತಿದ್ದಾನೆ ಎಂಬುದಾಗಿ ನಿರೂಪಣ ಮಾಡಿ, ಆ ನಿರ್ಗುಣ ಪರತತ್ವದಿಂದ ಸಗುಣ ಪ್ರಪಂಚವು, ಏಕಪದಾರ್ಥದಿಂದ ಬಹುಪದಾರ್ಥಗಳು ಉಂಟಾದ ಕ್ರಮವನ್ನು ವಿಶ್ವಕರ್ಮಾ ಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದ್ವಿತೀಯಃ। ತೃತೀಯಃ ಪಿತಾ ಜನಿತೌಷಧೀನಾಂ ಅಪಾಂ ಗರ್ಭಂ ವ್ಯದಧಾತ್ಪುರುತ್ರಾ॥— ಯಜುಃ. ೪-೬-೨ ಬ್ರಹ್ಮಾಂಡ ಮಧ್ಯದಲ್ಲಿ ದೇವತಿರ್ಯಗಾದಿ ವಿವಿಧ ಭೇದವನ್ನುಂಟುಮಾಡಿರುವ ವಿಶ್ವಕರ್ಮನು ಮೊದಲು ತಾನೇ ಬ್ರಹ್ಮನಾಗಿಯೂ ಅನಂತರ ಗಂಧರ್ವನಾಗಿಯೂ ತರುವಾಯ ಸೋಮನಾಗಿಯೂ ಬಹುವಿಧವಾದ ರೂಪಿನಿಂದ ತಾನೇ ಕಾಣಿಸಿಕೊಂಡವನಾದನು. ಶುದ್ಧ ಸತ್ವಗುಣಯುತವಾದ ಪರಮಾತ್ಮಸಾಕ್ಷಾತ್ಕಾರವೆಂಬ ತನ್ನ ದಿವ್ಯದರ್ಶನ ವನ್ನು ಪ್ರತಿಯೊಬ್ಬನಲ್ಲಿಯೂ ಉಂಟುಮಾಡುವ ರೀತಿಯಾಗಿ ತಾನೇ ಸರ್ವರೂಪ ನಾಗಿರುತ್ತಾನೆ ಎಂಬುದಾಗಿ ಆ ದೈವಿಕ ಕ್ರಮದಿಂದ ಜಗತ್ತು ಶುದ್ಧ ಸತ್ವಗುಣ ಯುತವಾಗುವಂತೆಯೂ, ಪರಮಾತ್ಮಸಾಕ್ಷಾತ್ಕಾರದಿವ್ಯದರ್ಶನವು ಪ್ರತಿಯೊಬ್ಬ ರಲ್ಲಿಯೂ ಉಂಟಾಗುವಂತೆಯೂ ರೂಪಿಸಲ್ಪಟ್ಟಿರುವ ಈ ಜಗತ್ಸೃಷ್ಟಿ ಜ್ಞಾನವೇ ಶಿಲ್ಪಜ್ಞಾನವೆಂಬುದಾಗಿಯೂ ನಿರೂಪಿಸಿರುತ್ತಾರೆ.

ಇಂತಹ ಮಹೋನ್ನತ ಶಿಲ್ಪವನ್ನು ಮೊಟ್ಟಮೊದಲು ತಮ್ಮ ತಪೋನುಷ್ಠಾನ ದಿಂದ ತಿಳಿದು ಜಗತ್ತಿಗೆ ಅದರ ಆದ್ಯ ಪ್ರವರ್ತಕರಾದವರು ಭಗವಾನ್ ಭೌವನ ಮಹಾಋಷಿಗಳು. ಏತೇನ ಹವಾ ಐಂದ್ರೇಣ ಮಹಾಭಿಷೇಕೇಣ ಕಶ್ಯಪೋ ವಿಶ್ವಕರ್ಮಾಣಂ ಭೌವನ ಮಭಿಷಿಷೇಚ। ತಸ್ಮಾದು ವಿಶ್ವಕರ್ಮಾಭೌವನ ಸ್ಸಮಗ್ರಂ ಸರ್ವತಃ ಪೃಥಿವೀಂ ಜಯನ್ ಪರಿಯಾಶ್ವೈ ರುಚಮೇಧ್ಯೈ ರೀಜೇ॥— ಐತ. ಬ್ರಾ. ೮-೨೧-೪ ಈ ಪರಮ ಜ್ಞಾನವನ್ನು ಲೋಕಕ್ಕೆ ಉಪದೇಶಿಸಿದ ಮಹಾತ್ಮರಾದ ಭೌವನ ಋಷಿಗಳನ್ನು ಸರ್ವಋಷಿಗಳೂ ಜಗತ್ತೂ

ವಿಶ್ವಕರ್ಮನೇ ಪ್ರತ್ಯಕ್ಷ ರೂಪದಿಂದ ಬಂದಿದ್ದಾರೆಂದು ತಿಳಿದು ಭಕ್ತಿಯಿಂದ ನಮಸ್ಕರಿಸಿ, ಅವರಿಗೆ ಮಹಾಭಿಷೇಕವನ್ನು ಮಾಡಿ, ಋಷಿಮಹಾಸಂಘಕ್ಕೆ ಅಧ್ಯಕ್ಷ ರನ್ನಾಗಿ ಮಾಡಿಕೊಂಡು ಗೌರವಿಸಿದರು. ಅವರಿಂದ ಭಗವಾನ್ ಕಶ್ಯಪರು ಆ ಶಿಲ್ಪ ವನ್ನು ಪರಿಗ್ರಹಿಸಿ ಅವನ್ನು ರಚಿಸಿದರು. ಅವರ ಆ ಪ್ರಪ್ರಥಮ ಶಿಲ್ಪವು ಯತ್ತೇ ಶಿಲ್ಪಂ ಕಶ್ಯಪರೋಚನಾವತ್—ಯಜುಃ. ಆರ. ೧-೭-೩ ಎಲೈ ಕಶ್ಯಪರೇ ತಮ್ಮಿಂದ ಸುಂದರವೂ ಬಲಿಷ್ಠವೂ ವಿಸ್ತೃತವೂ ತೇಜೋಮಯವೂ ಆದ ಈ ಶಿಲ್ಪವು ಜಗತ್ಸೃಷ್ಟಿಕ್ರಮದಂತೆಯೇ ನಿರ್ಮಿಸಲ್ಪಟ್ಟದೆ ಎಂದು ಗೌರವಿಸಲ್ಪಟ್ಟಿತು. ತೇ ಅಸ್ಮೈ ಸರ್ವೇ ಕಶ್ಯಪಾಜ್ಜ್ಯೋತಿ ರ್ಲಭಂತೇ—ಯಜುಃ. ಆರ. ೧-೭-೩ ಮಹಾಜ್ಞಾನಿಗಳಾದ ಕಶ್ಯಪರಿಂದ ಜ್ಞಾನಜ್ಯೋತಿ ರೂಪವಾದ ಶಿಲ್ಪವನ್ನು ಎಲ್ಲರೂ ಅರಿತು ಹೊಂದಿದವರಾದರು. ಅದು ಕಾರಣದಿಂದಲೇ ಕಶ್ಯಪರಿಂದಲೇ ಈ ಸಮಸ್ತ ಪ್ರಪಂಚವೂ ನಿರ್ಮಿಸಲ್ಪಟ್ಟಿತೆಂಬುದಾಗಿಯೂ, ಕಶ್ಯಪರಿಗೆ-೧೩ ಜನ ಪತ್ನಿಯರಿದ್ದು ಅವರುಗಳ ಗರ್ಭದಿಂದ ದೈತ್ಯ ದಾನವ ಮನುಷ್ಯೋರಗ ಪಕ್ಷ್ಯಾದಿ ಸಮಸ್ತ ಪ್ರಾಣಿವರ್ಗಗಳೂ ಜನಿಸಿದುವೆಂಬುದಾಗಿಯೂ ಪುರಾಣ ವಾಕ್ಯಗಳು ಕಾವ್ಯರೀತಿ ಯಾಗಿ ಸಾರುತ್ತಿವೆ. ಕಶ್ಯಪಾದಿ ಸರ್ವ ಮಹರ್ಷಿಗಳೂ ಶಿಲ್ಪಜ್ಞಾನಿಗಳಾಗಿದ್ದು ಶಿಲ್ಪಿ ಗಳೆನಿಸಿದುತ್ತಾರೆ. ಅವರೆಲ್ಲರೂ ಈ ಶಿಲ್ಪಜ್ಞಾನವನ್ನು ವೇದದ ಮೂಲಕ ಲೋಕಕ್ಕೆ ಅನುಗ್ರಹಿಸಿರುತ್ತಾರೆ. ವೇದವೆಂದರೆ ಶಿಲ್ಪವೇ. ಏಕೆಂದರೆ ಶಿಲ್ಪದ ವ್ಯಕ್ತರೂಪವೇ ಜ್ಞಾನವೂ, ಆ ಜ್ಞಾನವೇ ವೇದವೂ ಆಗಿರುತ್ತದೆ. ಜ್ಞಾನವು ಮನಸ್ಸಿನಲ್ಲಿ—ಬುದ್ಧಿ ಯಲ್ಲಿ ಬಿಂಬಿಸಬೇಕಾದರೆ ಅದಕ್ಕೆ ಶಿಲ್ಪವೇ ಮೂಲಕಾರಣವು. ವೇದವು ತಾನೇ ಶಿಲ್ಪವನ್ನು ಬಹುವಾಗಿ ಪ್ರಶಂಸಿಸುತ್ತದೆ. ಶಿಲ್ಪಾನಿ ಶಂಸಂತಿ ದೇವ ಶಿಲ್ಪಾ ನ್ಯೇತೇಷಾಂ ವೈ ಶಿಲ್ಪಾನಾ ಮನುಕೃತೀಹ ಶಿಲ್ಪ ಮಧಿಗಮ್ಯತೇ ಹಸ್ತೀ ಕಂಸೋ ವಾಸೋ ಹಿರಣ್ಯ ಮಶ್ವತರೀ ರಥ ಶ್ಶಿಲ್ಪಂ ಹಾಸ್ಮಿನ್ನಧಿಗಮ್ಯತೇ ಯ ಏವಂ ವೇದ ಯದೇವ ಶಿಲ್ಪಾನಿ ಆತ್ಮ ಸಂಸ್ಕೃತಿ ರ್ವಾವ ಶಿಲ್ಪಾನಿ ಛಂದೋಮಯಂ ವಾ ಏತೈ ರ್ಯಜಮಾನ ಆತ್ಮಾನಂ ಸಂಸ್ಕುರುತೇ— ಐತ. ಬ್ರಾ. ೬-೨೦-೫. ಶಿಲ್ಪವು ಸಕಲ ಜಗತ್ತಿನಲ್ಲಿಯೂ ಏಕಮಾತ್ರ ಪ್ರಶಂಸೆಗೆ ಕಾರಣವಾಗಿರುತ್ತದೆ. ಏಕೆಂದರೆ ಜಗತ್ಸೃಷ್ಟಿ ಕ್ರಮರೂಪವಾದ ದೈವ ಶಿಲ್ಪವೇ ಇತರ ಎಲ್ಲಾ ಮಾನುಷ ಶಿಲ್ಪಗಳಿಗೂ ಕಾರಣರೂಪವಾಗಿರುವುದರಿಂದ ಮನುಷ್ಯಶಿಲ್ಪವೂ ದೈವಶಿಲ್ಪದಂತೆಯೇ ಮಹತ್ವ ಪೂರ್ಣವಾಗಿದೆ. ಶಿಲೆ ಲೋಹ ಗೃಹ (ಮರ) ಹಿರಣ್ಯ ರಥ (ಕಬ್ಬಿಣ) ಈ ಐದು ವಿಧ ಕರ್ಮಗಳೂ ಶಿಲ್ಪಗಳೆನಿಸಿವೆ. ಯಾವನು ಈ ಶಿಲ್ಪವನ್ನು ತಿಳಿಯುವನೋ ಆ ಶಿಲ್ಪವು ಆತ್ಮ ಸಂಸ್ಕಾರವನ್ನು ಅವನಿಗೆ ಉಂಟುಮಾಡುತ್ತದೆ. ಈ ಶಿಲ್ಪವೆಂಬ ವಸ್ತುನಿರ್ಮಾಣಜ್ಞಾನವೂ ಛಂದೋಮಯವಾದ ವೇದವೂ ಸಮಾನವಾದುವು. ಅಷ್ಟೇಕೆ ಎರಡೂ ಒಂದೇ ಆಗಿರುತ್ತದೆ. ಶಿಲ್ಪವೇ ಛಂದೋಮಯವಾದ ವೇದವು. ಇವುಗಳಿಂದ ವೇದ

ಮತ್ತು ಶಿಲ್ಪಗಳಿಂದ (ಎರಡನ್ನೂ ಎರಡು ಅರ್ಥವನ್ನೂ ತಿಳಿಯುವುದರಿಂದ) ಆತ್ಮನು ಸಂಸ್ಕಾರಹೊಂದಿ ಪೂರ್ಣನಾಗುತ್ತಾನೆ—ಎಂಬುದಾಗಿ ಹೇಳಲ್ಪಟ್ಟಿದೆ. ಈ ವೇದವಾಕ್ಯದಿಂದ ವೇದವೂ ಶಿಲ್ಪವೂ ಸಮಾನವಾಗಿ ಪ್ರತಿಯೊಬ್ಬರಿಂದಲೂ ತಿಳಿದು ಅನುಷ್ಠಿಸಲ್ಪಡುತ್ತಿತ್ತೆಂಬುದು ತಿಳಿದುಬರುತ್ತದೆ.

ಶಿಲ್ಪ ಶಬ್ದವು ಶೀಲ-ಸಮಾಧೌ ಶೀಲ್ಯತ ಇತಿ ಶಿಲ್ಪಂ ಎಂಬ ಧಾತುವ್ಯುತ್ಪತ್ತಿ ರೀತಿಯಾಗಿ ತಪೋ ರೂಪವಾದ ಮನಸ್ಸಮಾಧಿಸ್ಥಿತಿಯಲ್ಲಿ ಉಂಟಾಗುವ ಯಾವ ಶುದ್ಧಜ್ಞಾನವಿದೆಯೋ ಅದೇ ಶಿಲ್ಪಜ್ಞಾನ ಎಂಬುದಾಗಿ ಹೇಳಲ್ಪಟ್ಟಿದೆ. ಅಂತಹ ಯೋಗ್ಯವಾದ ಮನಸ್ಸು ಮನುಷ್ಯೇತರ ಪ್ರಾಣಿಗಳಲ್ಲಿ ಇರುವುದಿಲ್ಲವೆಂಬುದಕ್ಕೆ ಮನುಷ್ಯ ಶಬ್ದವೇ ಅರ್ಥಪ್ರಚೋದನೆಯನ್ನು ಉಂಟುಮಾಡುತ್ತದೆ. ಮನಸಃ-ವಿಚಾರಶಕ್ತೇಃ, ಉಷ್ಯಂ-ವಸತಿಯೋಗ್ಯಂ ಸ್ಥಾನಂ ಎಂಬ ನಿರುಕ್ತ ವಾಕ್ಯಾನುಸಾರವಾಗಿ ಶೀಲ-ಸಮಾಧಿಗೆ ಅರ್ಹವಾದ ಮನಸ್ಸಿನ ವಾಸಾರ್ಹಸ್ಥಾನ ಮನುಷ್ಯ ಎಂದಾಗುತ್ತದೆ. ಆದುದರಿಂದ ವಿಚಾರಶಕ್ತಿಯನ್ನು ಬೆಳೆಸಿಕೊಂಡು ಸಮಾಧಿಯೋಗವನ್ನು ಸಾಧಿಸಿದ ಜ್ಞಾನಿಯಾದ ಮನುಷ್ಯನೇ ಶಿಲ್ಪಜ್ಞಾನಕ್ಕೆ ಅಧಿಕಾರಿಯೂ ಶಿಲ್ಪ ನಿರ್ಮಾಣಕ್ಕೆ ಯೋಗ್ಯನೂ ಆಗಿ ಆತನಿಂದ ನಿರ್ಮಿಸಲ್ಪಟ್ಟ ವಸ್ತು ನಿರ್ಮಾಣವೇ ಶಿಲ್ಪವೆಂದು ಹೇಳಲ್ಪಟ್ಟಿರುತ್ತದೆ.

ಇಂತಹ ಶಿಲ್ಪದಲ್ಲಿ ಕುಟುಂಬೋಪಯುಕ್ತಗಳಾದ ಗೃಹ ಪಾತ್ರೆ ಆಭರಣ ವಾಹನಾದಿಗಳ ನಿರ್ಮಾಣ ಕ್ರಮಗಳು ಮಾತ್ರವಲ್ಲದೆ ದೇಶೋಪಯುಕ್ತಗಳಾದ ನೌಕಾ ಜಲವಿದ್ಯುತ್ ಸೈನ್ಯಾಯುಧ ವಿಮಾನ ಪ್ರಾಕಾರ ನಗರ ಯಂತ್ರಾದಿಗಳ ರಚನಾಕ್ರಮಗಳೂ ಹೇಳಲ್ಪಟ್ಟಿರುತ್ತದೆ. ವೇದದಲ್ಲಿ ಈ ಬಹು ವಿಷಯಗಳು ಹೇಳಲ್ಪಡುವುದರಿಂದ ವೇದವು ಶಿಲ್ಪಜ್ಞಾನವೇ ಎಂದು ಮೇಲೆ ಹೇಳಲ್ಪಟ್ಟಿರುವ ಐತರೇಯ ಬ್ರಾಹ್ಮಣ ವಾಕ್ಯವು ಮತ್ತಷ್ಟು ಸಮರ್ಥಿತವಾಗುತ್ತದೆ.

**ನೌಕಾಶಿಲ್ಪ—ಯಮೇನ ತತಂ ಪರಿಧಿಂ ವಯಂತೋಽಪ್ಸರಸ ಉಪ ಸೇದರ್ವಸಿಷ್ಠಾಃ**—ಋಕ್ ೭-೩-೩೯. ನಾವಿಕನ ವಶದಲ್ಲಿ ಇರುವ ನೀರಿನಲ್ಲಿ ಸಂಚರಿಸುವ ನೌಕೆಗಳು ಬುದ್ಧಿವಂತನಾದ ನೌಕಾ ಯಜಮಾನನಿಂದ ಸಮುದ್ರಗಳ. ಆಚೆಯ ತೀರವನ್ನು ತಲಪುವಂತೆ ಸಂಚರಿಸುತ್ತಿವೆ. ಮತ್ಸ್ಯಾದಿಗಳಿಂದ ಅಪಾಯವಾಗದಿರಲು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಸಂಚರಿಸಲು ಅವಕ್ಕೆ ಶಕ್ತಿಯು ನೌಕಾ ನಿರ್ಮಾಣಮಾಡಿದ ಸ್ಥಪತಿ (ಶಿಲ್ಪಿ)ಯಿಂದ ಕೊಡಲ್ಪಟ್ಟಿದೆ. (ಪೂರ್ವದಲ್ಲಿ ಗಾಳಿಯ ಪಟಗಳ ಸಹಾಯವಿಲ್ಲದೆ ಯಂತ್ರ ಶಕ್ತಿಯಿಂದ ನಡೆಯುತ್ತಿದ್ದ ಜಹಜುಗಳು ಇದ್ದುವೆಂಬುದನ್ನು ಇದು ದೃಢಪಡಿಸುತ್ತದೆ) **ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ ಸುಶರ್ಮಾಣ ಮದಿತಿಂ ಸುಪ್ರಣೀತಿಂ। ದೈವೀಂ ನಾವಂ ಸ್ವರಿತ್ರಾಮನಾಗಸ ಮಸ್ರವಂತೀ ಮಾರುಹೇಮಾ ಸ್ವಸ್ತಯೇ**—ಋಕ್. ೧೦-೬೩-೧೦ ನಡೆಸುವ ಸಾಧನಗಳಿಂದ ಯುಕ್ತವಾದ, ನೀರಿನಲ್ಲಿರುವ

ಪೃಥ್ವಿಯಂತೆಯೂ, ಆಕಾಶದಲ್ಲಿರುವ ಗ್ರಹದಂತೆಯೂ ಮನೋಹರವಾದ ವಿಸ್ತಾರ ವಾದ, ನೀರನ್ನು ಒಳಕ್ಕೆ ಬರಗೊಡಿಸದ, ಧ್ವಜಾದಿಗಳಿಂದ ಶೋಭಿಸುವ, ಶಿಲ್ಪಿ ಯಿಂದ ಕೊಡಲ್ಪಟ್ಟ ಸಂಪೂರ್ಣ ಶಕ್ತಿಯಿಂದ ದೃಢವಾದ ನೌಕೆಯನ್ನು ನಾವು ಹತ್ತಿ ನಮ್ಮ (ದೇಶ) ಹಿತಾರ್ಥವಾಗಿ ನಡೆಸುತ್ತೇವೆ. (ಅಂತರಿಕ್ಷದಲ್ಲಿಯೂ ನೀರಿನಲ್ಲಿಯೂ ಯಂತ್ರಶಕ್ತಿಯಿಂದ ಸಂಚರಿಸಬಲ್ಲ ಏರ್‌ಬೋಟುಗಳೂ ಇದ್ದುವೆಂಬುದಕ್ಕೆ ಈ ವಾಕ್ಯವೇ ಸಾಕ್ಷಿಯಾಗಿದೆ.)

ರಥಶಿಲ್ಪ—ರಥಂ ಯೇಚಕ್ರುಃ ಸುವೃತಂ ಸುಚೇತಸೋ ವಿಹ್ವರಂತಂ ಮನಸ್ಪರಿಧ್ಯಯಾ—ಋಕ್ ೩-೭-೨೮. ಅಶ್ವಿನೀ ಕುಮಾರರೆಂಬ ಶಿಲ್ಪಿಗಳು ಸ್ವಬುದ್ಧಿಸಾಮರ್ಥ್ಯದಿಂದ ಸುಂದರವೂ ಯಥೇಷ್ಟಗಮನವೂ ಶಕ್ತಿಯುತವೂ ಆದ ರಥವನ್ನು ನಿರ್ಮಿಸಿರುತ್ತಾರೆ. ಆ ರಥಕ್ಕೆ ದುಂಡಾಕೃತಿಯಾದ ಚಕ್ರಗಳನ್ನು ಜೋಡಿಸಿ ಆನಂದಕರಗಳಾಗಿ ತಯಾರಿಸಿರುತ್ತಾರೆ.

ವಿಮಾನ ಶಿಲ್ಪ—ಆ ವಿದ್ಯುನ್ಮದ್ಭಿ ರ್ಮರುತಃ ಸ್ವರ್ಕೈ ರಥೇಭಿ ರ್ಯಾತ ಋಷ್ಟಿಮದ್ಭಿ ರಶ್ವಪರ್ಣೈಃ—ಋಕ್ ೧-೧೪-೪. ವಿದ್ಯುತ್ತಿ ನಿಂದ ಸಂಶೋಧಿಸಿ ತೆಗೆಯಲ್ಪಟ್ಟ 'ಉದಾನ' ಎಂಬ ಹೆಸರಿನ ವಾಯುವಿನಿಂದ ತುಂಬಲ್ಪಟ್ಟ ಎಕ್ಕದ ಹಣ್ಣಿನ ಆಕೃತಿಯಂತಿರುವ ಕುಡಿಕೆಗಳಿಂದ ನಿರ್ಮಿಸಲ್ಪಟ್ಟಿ ರುವ ಈ ರಥದಲ್ಲಿ ಕುಳಿತು ನೀವು ಊರ್ಧ್ವಗಾಮಿಗಳಾಗಿ ಕುದುರೆಗಳ ವೇಗಕ್ಕಿಂ ತಲೂ ಹೆಚ್ಚು ವೇಗವಾಗಿ ಸಂಚರಿಸಿ ಬರುವವರಾಗಿ.

ವಾಸ್ತು ಶಿಲ್ಪ—ಇಹೈವಧ್ರುವಾಂ ನಿಮಿನೋಮಿಶಾಲಾಂ ಕ್ಷೇಮೇ ತಿಷ್ಠಾತು ಘೃತಮುಕ್ಷಮಾಣಾ। ಅಶ್ವಾವತೀ ಗೋಮತೀಸೂನೃತಾವರೀ ಉಚ್ಛ್ರಯಸ್ವಮಹತೇ ಸೌಭಗಾಯ॥—ಋಕ್ ೧೦-೭-೧. ಈ ಶುಭ ವಾದ ಸ್ಥಳದಲ್ಲಿ ನನ್ನ ಮನೆಯನ್ನು ಕಟ್ಟುತ್ತೇನೆ. ಅದರಲ್ಲಿ ಹಸುಗಳೂ ಕುದುರೆ ಗಳೂ ಮಕ್ಕಳೂ ಐಶ್ವರ್ಯವೂ ಎಲ್ಲ ಕಾರ್ಯಗಳೂ ಅತಿಥಿಸತ್ಕಾರವೂ ವಾಸ ಮಾಡಲು ತಕ್ಕಂತೆ ಕಟ್ಟುವ ಈ ಮನೆಯು ಅಭಿವೃದ್ಧಿ ಹೊಂದಲಿ.

ಪ್ರಾಕಾರ ಶಿಲ್ಪ—ಯತ್ತೇ ಶಿಲ್ಪಂ ಕಶ್ಯಪರೋಚನಾವತ್। ಇಂದ್ರಿ ಯಾವತ್ಪುಷ್ಕಲಂ ಚಿತ್ರಭಾನು। ತಸ್ಮಿನ್ಸೂರ್ಯಾ ಅರ್ಪಿತಾಸ್ಸಪ್ತಸಾಕಂ। ತಸ್ಮಿನ್ ರಾಜಾನಮಧಿವಿಶ್ರಯೈನಂ॥—ಯಜುಃ. ಆರ. ೧-೭-೩. ಸುಂದ ರವೂ ಬಲಿಷ್ಠವೂ ವಿಸ್ತೃತವೂ ತೇಜೋಮಯವೂ ಆದ ಈ ಶಿಲ್ಪವು ನಿರ್ಮಿಸಲ್ಪ ಟ್ಟಿರುತ್ತದೆ. ಈ ಶಿಲ್ಪವು ಸೂರ್ಯನು ಪೃಥ್ವಿಯನ್ನು ರಕ್ಷಿಸುವಂತೆ ನಮ್ಮ ರಾಜ ನನ್ನು ಕ್ಷೇಮದಿಂದ ಕಾಪಾಡಲಿ. ಈ ಶಿಲ್ಪದಲ್ಲಿ (ಪ್ರಾಕಾರ-ದುರ್ಗ) ರಾಜನಿಗೆ ಆಶ್ರಯವನ್ನು ಎಲೈ ಕಶ್ಯಪರೇ ನೀವು ಕೊಡುವವರಾಗಿ. (ಮಂತ್ರಿಗಳು ರಾಜನ ಪರವಾಗಿ ಶಿಲ್ಪಿಯನ್ನು ಈ ರೀತಿ ಪ್ರಾರ್ಥಿಸುತ್ತಾರೆ.)

ನಗರ ಶಿಲ್ಪ—ಯೇಪಂಥಾನೋ ಬಹವೋ ದೇವಾಯಾನಾ ಅಂತರಾ ದ್ಯಾವಾಪೃಥಿವೀಂಸಂಚರಂತಿ । ತೇ ಮಾ ಜುಷಂತಾಂ ಪಯಸಾಘೃತೇನ

ಯಥಾ ಕ್ರೀಳಾ ಧನಮಾಹರಾಣಿ, ॥—ಅಥ. ೩-೧೫-೨. ಭೂಮಿಯಲ್ಲೂ ಅಂತರಿಕ್ಷದಲ್ಲೂ ರಥಗಳು ಸಂಚರಿಸುವಂಥಾ ಬೀದಿಗಳಿಂದಲೂ ಮನುಷ್ಯರಿಂದಲೂ ಕೂಡಿ ಈ ಸಮೂಹ ಸ್ಥಾನವು ಪ್ರಕಾಶಿಸುತ್ತದೆ. ಇದರಿಂದ ಸರ್ವರೂ ತೃಪ್ತಿಪಡಲಿ. ಹಾಲು ಮೊಸರು ತುಪ್ಪಗಳು ಯಥೇಷ್ಟವಾಗಿ ಮಾರಾಟವಾಗಿ ಎಲ್ಲರಿಗೂ ಜೀವ ನಾನುಕೂಲ ಸಂಪತ್ತು ಸಮವಾಗಿ ದೊರಕುವಂತಾಗಲಿ (ವಿಮಾನ ನಿಲ್ದಾಣಗಳೂ ನೌಕಾಬಂದರುಗಳೂ ಆ ನಗರಗಳಲ್ಲಿದ್ದಿರಬೇಕು).

ಯಂತ್ರ ಶಿಲ್ಪ—ತಕ್ಷನ್ ಧೇನುಂ ಕಾಮದುಘಾಂ ॥ ಋಗ್ವೇದ- ಎಲೈ ಶಿಲ್ಪಜ್ಞರೇ ಯಾವುದು ನಮಗೆ ಅತ್ಯವಶ್ಯಕವಾಗಿ ಬೇಕಾಗಿದೆಯೋ ಅದೆಲ್ಲವೂ ದೊರಕಲು ಸಮರ್ಥವಾದ ಕಾಮಧೇನುವನ್ನು ನಿರ್ಮಿಸಿಕೊಡಿ, (ಈ ಮಂತ್ರಾರ್ಥ ದಿಂದ ಕಾಮಧೇನುವೆಂಬ ಪ್ರಸಿದ್ಧವಾದ ಮಹಾಯಂತ್ರವನ್ನು ಶಿಲ್ಪಿಗಳು ನಿರ್ಮಿಸಿ ಲೋಕಕ್ಕೆ ಅನುಪಮವಾದ ಕ್ಷೇಮವನ್ನು ಸಾಧಿಸಿದ್ದರು ಎಂಬುದನ್ನು ನಂಬಬಹುದು. ತಕ್ಷನ್ ಶಬ್ದಾರ್ಥದಿಂದ ಕಾಮಧೇನುವೆಂಬುದು ಯಂತ್ರ ವಿಶೇಷವೆಂಬುದಾಗಿಯೇ ಸಿದ್ಧವಾಗುತ್ತದೆ. ವಸಿಷ್ಠನಲ್ಲಿ ಇಂತಹ ಕಾಮಧೇನುವೊಂದು ಇತ್ತೆಂಬುದೂ ವಿಶ್ವಾ ಮಿತ್ರನು ಅದನ್ನು ತೆಗೆದುಕೊಂಡು ಹೋಗಬೇಕೆಂದು ವಸಿಷ್ಠನೊಡನೆ ಯುದ್ಧ ಮಾಡಿದನೆಂಬುದೂ ಜನಜನಿತವಾದ ಕಥೆಯೇ ಇರುತ್ತದೆ.) ಪುನರ್ಯೇಚಕ್ರುಃ ಪಿತರಾಯುವಾನಾ ಸನಾಯೂಪೇವ ಜರಣಾ ಶಯಾನಾ। ಋಕ್ ೪-೫-೧- ಯಾವ ಶಿಲ್ಪಿಗಳು ಮುಪ್ಪಿನಿಂದ ಜರ್ಜರಿತರಾದ ಹಿರಿಯರನ್ನು ಪುನರ್ಯೌವನ ಸಂಪನ್ನರನ್ನಾಗಿ ಮಾಡಲು ಪ್ರಯತ್ನಪಟ್ಟು ಸಾಧನಗಳನ್ನು ನಿರ್ಮಿಸಿದರೋ ಅವರು ಎಲ್ಲರಿಗೂ ಅತ್ಯಂತ ಹಿರಿಯರು (ಪೂಜ್ಯರು). ತ್ವಷ್ಟಾ ದುಹಿತ್ರೇ ವಹ ತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ। ಋಕ್ ೧೦-೨-೧. ತ್ವಷ್ಟೃವು ತನ್ನ ಮಗಳಿಗೆ ತಾಪವನ್ನು ಕೊಡುತ್ತಿದ್ದ ಸೂರ್ಯನನ್ನು ತಕ್ಷಿಸಿದನು. (ಆಯುಧ ಪ್ರಯೋಗದಿಂದ ಆತನ ತಾಪಶಕ್ತಿಯನ್ನು ಕಡಿಮೆಮಾಡಿದನು) ಲೋಕಕ್ಕೆ ಉಪಯೋಗವಾಗುವಷ್ಟು ಮಾತ್ರ ಕಿರಣಗಳನ್ನು ನಿಲ್ಲಿಸಿದನು. ಇದ ರಿಂದ ಸೂರ್ಯನು ಲೋಕಕಲ್ಯಾಣಕಾರಕನಾಗಿರುತ್ತಾನೆ.

ಸೈನ್ಯಾಯುಧ ಶಿಲ್ಪ—ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ॥ ಋಕ್ ೧-೪೮-೩. ಇಂದ್ರನು ಹೇಳುತ್ತಾನೆ. ಎಲೈ ತ್ವಷ್ಟೃವೇ ನಮಗಾಗಿ ಒಳ್ಳೆಯ ಉಕ್ಕಿನಿಂದ ವಜ್ರಾಯುಧವನ್ನು ನಿರ್ಮಿಸಿಕೊಡು. ಅದು ಪರ್ವತಗಳನು ಭೇದಿಸುವಷ್ಟು ಶಕ್ತಿಯುತವಾಗಿರಲಿ.

ರಾಜನ ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ ಸಿಂಹಾಸನದ ಮೇಲೆ ಕುಳಿತಿರುವ ರಾಜನನ್ನು ಆಶೀರ್ವಾದ ಮಾಡುವ ಕಾಲದಲ್ಲಿ ಶಿಲ್ಪಿಗಳಿಂದ ಹೇಳಲ್ಪ ಡುವ ಯೇಭಿಶ್ಶಿಲ್ಪೈಃ ಪಪ್ರಥಾನಾ ಮದೃಗಂಹತ್ । ಯೇಭಿರ್ದ್ಯಾಮಭ್ಯ ಪಿಗ್ಂಶತ್ಪ್ರಜಾಪತಿಃ । ಯೇಭಿರ್ವಾಚಂ ವಿಶ್ವರೂಪಾಗ್ಂ ಸಮವ್ಯಯತ್।

ತೇನೇಮಮುಗ್ನ ಇಹವರ್ಚಸಾ ಸಮಂಗ್ಧಿ ॥ ತೈ. ಬ್ರಾ. ೨-೮-೨೫. ಎಲೈ ಅಗ್ನಿಪ್ರಕಾಶಸ್ವರೂಪನಾದ ಪರಮಾತ್ಮನೇ, ಯಾವ ಪ್ರಜಾಪತಿ ಶಿಲ್ಪಿಯು ತನ್ನ ಜ್ಞಾನಕೌಶಲ್ಯಯುಕ್ತರಾದ ಕಲಾವಿದರಾದ ಶಿಲ್ಪಿಗಳಿಂದ ಮಾಡಲ್ಪಟ್ಟ ಶಿಲ್ಪ ಕಾರ್ಯಗಳಿಂದ ವಿಸ್ತಾರವಾದ ಈ ಪೃಥ್ವಿಯನ್ನು ಸಂಪತ್ಸಮೃದ್ಧವನ್ನಾಗಿಯೂ, ಪ್ರಜೋಪಯುಕ್ತವಾದ ಶಿಲ್ಪನಿರ್ಮಾಣಗಳಿಂದ ಅಂತರಿಕ್ಷವನ್ನು ಪ್ರಕಾಶಯುತ ವನ್ನಾಗಿಯೂ ಮನೋಹರವನ್ನಾಗಿಯೂ, ವಾಕ್ ಎಂದರೆ ವಿಜ್ಞಾನಜ್ಞಾನಬೋಧಕ ಗಳಾದ ಗ್ರಂಥಗಳನ್ನೂ ವೇದಸಮೂಹವನ್ನೂ ವಿಶೇಷಾರ್ಥಗಳಿಂದ ಕೂಡಿದ ಮಹಿಮಾವಿಶೇಷವುಳ್ಳ ವಿಶ್ವವಿಶಾಲರೂಪವನ್ನಾಗಿಯೂ ಮಾಡಿರುವನೋ ಆತನ ಅನುಗ್ರಹಬಲದಿಂದ (ಅಂತಹ ಶಿಲ್ಪಿಗಳ ಅನುಗ್ರಹ ವಿಶೇಷ ಬಲದಿಂದ) ಈ ರಾಜ ನನ್ನು ಸಂಪತ್ಸಮೃದ್ಧನನ್ನಾಗಿ ಮಾಡು—ಎಂಬ ಈ ಮಂತ್ರವು ಶಿಲ್ಪಿಗಳ ಜ್ಞಾನ ಕರ್ಮಗಳ ಸಾಮರ್ಥ್ಯವನ್ನೂ ರಾಜ್ಯವ್ಯವಸ್ಥೆಯಲ್ಲಿನ ಶಿಲ್ಪಿಗಳ ಪಾತ್ರತೆಯನ್ನೂ ನಿರೂಪಿಸುತ್ತದೆ.

ಹೀಗೆ ವೇದಗಳಲ್ಲಿ ಸಕಲವಿಧ ಶಿಲ್ಪವೂ ಹೇಳಲ್ಪಟ್ಟಿರುತ್ತದೆ. ಆದುದರಿಂದಲೇ ವೇದವು ಶಿಲ್ಪಮಯವಾದುದು ಎಂಬುದು ಪ್ರಮಾಣ ವಾಕ್ಯವಾಗಿರುತ್ತದೆ. ಶಿಲ್ಪ ನಿರ್ಮಾಣ ಸಮರ್ಥರಾದ ತ್ವಷ್ಟೃ ಋಭು ನಾಭಾದೇದಿಷ್ಟ ವಾಲಖಿಲ್ಯ ವಿಪ್ರಚಿತ್ತಿ ದಧ್ಯಙ್ಙಥರ್ವಣ ನಾರಾಶಂಸೀಃ ವಾರ್ಷಾಕಪ ಐತಶಪ್ರಲಾಪ ಸುಕೀರ್ತಿ ಶಿಲ್ಪಃ ಕಶ್ಯಪ ಆಭೂತಿಸ್ತ್ವಾಷ್ಟ್ರ ವ್ಯಷ್ಟಿ ಸನಾರು ಸನಾತನ ಸನಕ ಮೊದಲಾದ ಶಿಲ್ಪಿಗಳು ಸಮಸ್ತ ಲೋಕಗಳಿಗೂ ಕಲ್ಯಾಣಕಾರಕವಾಗುವಂತೆ ಶಿಲ್ಪಕಾರ್ಯಗಳನ್ನು ನಡೆಸಿ ವೇದಗಳಲ್ಲಿ ಶಿಲ್ಪಮಂತ್ರಗಳ ದ್ರಷ್ಟಾರರಾಗಿರುತ್ತಾರೆ.

ಈ ಶಿಲ್ಪವು ಗುರುಮುಖದಿಂದ ಶಿಷ್ಯರಿಗೆ ಪ್ರವಚನರೂಪವಾಗಿಯೂ ಕರ್ಮ ಕೌಶಲ ರೂಪವಾಗಿಯೂ ಉಪದೇಶಿಸಲ್ಪಟ್ಟು ಶಿಷ್ಯಪ್ರಶಿಷ್ಯಪರಂಪರೆಯಿಂದ ಪ್ರಾಚೀನಕಾಲದಲ್ಲಿ ಬಹು ಅಭಿವೃದ್ಧಿಯನ್ನು ಹೊಂದಿತ್ತು. ವೇದದಿಂದ ಕೂಡಿದ ಶಿಲ್ಪಪ್ರವಚನಾಧ್ಯಯನ ಕರ್ಮಗಳು ದೇಶದ ಎಲ್ಲೆಡೆಯಲ್ಲಿಯೂ ಆಶ್ರಮ ಸಂಸ್ಥೆ ಗಳಲ್ಲಿ ನಡೆಯುತ್ತಿದ್ದುವು. ಆದುದರಿಂದಲೇ ವೇದಾಧ್ಯಯನ ಗುರುಪರಂಪರೆಯಲ್ಲಿ ವೇದೋಕ್ತರಾದ ಪ್ರಸಿದ್ಧ ಶಿಲ್ಪಿ ಗುರುಗಳು ಪ್ರಕಾಶಿಸುತ್ತಿರುವುದು ಬೃಹದಾ ರಣ್ಯಕದಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತದೆ. ಅಸಿತೋವಾರ್ಷಗಣೋ ಹರಿತಾ ತ್ಕಶ್ಯಪಾತ್ ಹರಿತಃಕಶ್ಯಪಶ್ಶಿಲ್ಪಾತ್‌ಕಶ್ಯಪಾತ್ ಶಿಲ್ಪಃಕಶ್ಯಪಃ ಕಶ್ಯ ಪಾನ್ನೈಧ್ರುವೇಃ ಕಶ್ಯಪೋನೈಧ್ರುವಿರ್ವಾಚಃ ವಾಗಂಭೀಣ್ಯಾ ಅಂಭಿ ಣ್ಯಾದಿತ್ಯಾತ್ ಆದಿತ್ಯ ಏತಾನೀಮಾನೀತಿ ॥ ಪಂಥಾಸೌಭರೋಽಯಾಸ್ಯಾ ದಾಂಗಿರಸ್ಯಾತ್ ಅಯಾಸ್ಯಆಂಗಿರಸಆಭೂತೇಸ್ತ್ವಾಷ್ಟ್ರಾತ್ ಆಭೂತಿ ಸ್ತ್ವಾಷ್ಟ್ರೋ ವಿಶ್ವರೂಪಾತ್ತ್ವಾಷ್ಟ್ರಾತ್ ವಿಶ್ವರೂಪಸ್ತ್ವಾಷ್ಟ್ರೋಽಶ್ವಿಭ್ಯಾಂ ಅಶ್ವಿನೌದಧೀಚಆಥರ್ವಣಾತ್ ದಧ್ಯಙ್ಙಾಥರ್ವಣೋಥರ್ವಣೋದೈವಾತ್

ಅಥರ್ವಾದೈವೋ ಮೃತ್ಯೋಃಪ್ರಾಧ್ವಗ್ಂಸನಾತ್ ಮೃತ್ಯುಃ ಪ್ರಾಧ್ವಗ್ಂಸನಃ ಪ್ರಧ್ವಗ್ಂಸನಾತ್ ಪ್ರಧ್ವಗ್ಂಸನಏಕಋಷೇಃ ಏಕಋಷಿರ್ವಿಪ್ರಚಿತ್ತೇಃ ವಿಪ್ರಚಿತ್ತಿರ್ವ್ಯಷ್ಟೇಃ ವ್ಯಷ್ಟಿಸ್ಸನಾರೋಃ ಸನಾರುಸ್ಸನಾತನಾತ್ ಸನಾತನಸ್ಸನಕಾತ್ ಸನಕಃ ಪರಮೇಷ್ಠಿನಃ ಪರಮೇಷ್ಠೀ ಬ್ರಹ್ಮಣೋ ಬ್ರಹ್ಮ ಸ್ವಯಂಭು ಬ್ರಹ್ಮಣೇನಮಃ ॥— ಬೃ.ಉ. ೬-೫-೩, ೪-೬-೩-

ಹೀಗೆ ಬೃಹದಾರಣ್ಯಕದಲ್ಲಿ ಕಂಡುಬರುವ ಈ ಮೇಲ್ಕಂಡ ಗುರುಪರಂಪರೆಯು ಶಿಲ್ಪಿಗಳದು ಎಂಬುದರಲ್ಲಿ ಸಂದೇಹವೇ ಇರುವುದಿಲ್ಲವೆಂಬುದು ಐತರೇಯ ಬ್ರಾಹ್ಮಣದ ೫-೨-೯ ರಲ್ಲಿ ಕಂಡುಬರುವ ಶಿಲ್ಪಿಗಳ ಮತ್ತು ಶಿಲ್ಪಮಾಹಾತ್ಮ್ಯದ ವರ್ಣನೆಯಲ್ಲಿ ಕಂಡುಬರುತ್ತದೆ. ಶಿಲ್ಪಿಗಳು ಶಿಲ್ಪವನ್ನು ತಮ್ಮ ತಪಸ್ಸಾಮರ್ಥ್ಯದಿಂದ ಸಂಶೋಧಿಸಿ ತೆಗೆಯುವುದಕ್ಕೆ ಅವರ ತತ್ವಜ್ಞಾನವೇ ಅವರಿಗೆ ಅಡಿಗಲ್ಲಾಗಿತ್ತು ಎಂಬುದು ಹಿಂದೆಯೇ ವಿವರಿಸಲ್ಪಟ್ಟಿದೆ. ಶಿಲ್ಪಜ್ಞಾನ ತತ್ವಜ್ಞಾನಗಳೆರಡರಲ್ಲೂ ಪೂರ್ಣವಿವರಾದ ಮೇಲ್ಕಂಡ ಶಿಲ್ಪಿಗಳು ಹೇಗೆ ಮೇಲ್ಕಂಡ ಗುರುಪರಂಪರೆಯಲ್ಲಿ ಪ್ರಕಾಶಿಸಿದರೋ ಅವರಂತೆಯೇ ಕೇವಲ ತತ್ವಜ್ಞಾನವೊಂದರಲ್ಲಿಯೇ ಉದ್ದಾಮ ವಿದ್ವದ್ವಿದರಾವ ಶಿಲ್ಪಿಗಳು ಇದ್ದರೆಂಬುದು ತೈತ್ತರೀಯ ಸಂಹಿತೆಯ ೪-೩-೩ ರಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಅನುವಾಕದಲ್ಲಿ ಹೇಳಲ್ಪಡುವ ಸಾನಗ ಸನಾತನ ಅಹಭೂನ ಪ್ರತ್ನ ಸುಪರ್ಣರೆಂಬ ಋಷಿಗಳು ಶಿಲ್ಪಿಕುಲಕ್ಕೆ ಗೋತ್ರಪ್ರವರ್ತಕರಾಗಿರುತ್ತಾರೆ ಎಂಬುದು ಸರ್ವತ್ರ ವಿದಿತವೇ ಆಗಿರುತ್ತದೆ. ಈ ಶಿಷ್ಯ ಪ್ರಶಿಷ್ಯ ವಂಶ ಪರಂಪರೆಯಿಂದ ಶಿಲ್ಪವೂ ವೇದವೂ ಸರ್ವತೋಮುಖವಾಗಿ ಸಮಾನವಾಗಿ ಪ್ರಾಚೀನಕಾಲದಲ್ಲಿಯೇ ಅಭಿವೃದ್ಧಿಯನ್ನುಹೊಂದಿ ಪೂರ್ಣತೆಯನ್ನು ಪಡೆದಿತ್ತು.

ವೇದಕಾಲದಿಂದೀಚೆಗೆ ಉಪನಿಷತ್ಕಾಲಕ್ಕೆ ಪೂರ್ವದಲ್ಲಿ ವೇದವು ಶಿಲ್ಪ ಮತ್ತು ವೇದಾಂತ ಅಥವಾ ಕರ್ಮ ಮತ್ತು ಜ್ಞಾನ ಎಂದು ಎರಡಾಗಿ ಕವಲೊಡೆಯಿತು. ಉಪನಿಷತ್ತುಗಳಲ್ಲಿ ಬಹು ಪ್ರಾಚೀನತಮವಾದ ಮೊಟ್ಟ ಮೊದಲನೆಯದೆಂದು ತಿಳಿಯಲ್ಪಟ್ಟಿರುವ ಈಶಾವಾಸ್ಯೋಪನಿಷತ್ತು ಕರ್ಮ ಜ್ಞಾನ ಎಂಬ ಈ ಶಿಲ್ಪ ವೇದಾಂತಗಳ ಸಾಮರಸ್ಯವನ್ನು ಉಂಟುಮಾಡುವುದಕ್ಕಾಗಿಯೇ ಜನಿಸಿತು ಎಂಬುದು ಆ ಉಪನಿಷತ್ತನ್ನು ಓದುವವರು ಎಲ್ಲರೂ ತಿಳಿಯಬಲ್ಲರು. ಆ ಉಪನಿಷತ್ತಿನ ವ್ಯಾಖ್ಯಾನಕಾರರು ಕರ್ಮ ಎಂಬುದಕ್ಕೆ ಶಿಲ್ಪವೆಂದು ಅರ್ಥಮಾಡುವುದಕ್ಕೆ ಬದಲಾಗಿ ಕರ್ಮವೆಂದರೆ ಕೇವಲ ಯಜ್ಞಕರ್ಮ ಅಥವಾ ಅದಕ್ಕೂ ಈಚಿನ ಅರ್ಥವಾದ ನಿತ್ಯನೈಮಿತ್ತಿಕಕರ್ಮಗಳೆಂದು ವ್ಯಾಖ್ಯಾನ ಮಾಡಿರುತ್ತಾರೆ ಎಂಬುದನ್ನು ಲಕ್ಷ್ಯದಲ್ಲಿಟ್ಟು ನೋಡಬೇಕು. ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ॥ ಈಶಾ- ೨. ಎಂಬ ವಾಕ್ಯದಲ್ಲಿನ ಕರ್ಮ ಶಬ್ದಕ್ಕೆ ಯಜ್ಞಕರ್ಮ ಅಥವಾ ನಿತ್ಯನೈಮಿತ್ತಿಕಕರ್ಮ ಎಂಬ ಸಂಕುಚಿತಾರ್ಥವನ್ನು ಬಿಟ್ಟು ಶಿಲ್ಪವೆಂಬ ವಿಶಾಲವ್ಯಾಪಕಾರ್ಥವನ್ನು ಹಚ್ಚಿದರೆ ಅದು ಹೇಗೆ ಪೂರ್ಣವಾದ ಅರ್ಥವಾಗ

ಬಲ್ಲದು ಎಂಬುದು ತಿಳಿಯಬರುತ್ತದೆ. ಹೀಗೆ ಶಿಲ್ಪ ವೇದಾಂತಗಳು ಬೇರೆಬೇರೆಯಾಗಿ ಕವಲೊಡೆದರೂ ವೇದಾಂತಜ್ಞಾನದ ಮೂಲವು ವೇದದ ವಿಶ್ವಕರ್ಮಸೂಕ್ತದಲ್ಲಿದೆಯೆಂಬುದು ಶಿಲ್ಪವು ವೇದಾಂತಜ್ಞಾನಕ್ಕೂ ಕೂಡ ಮಾತೃರೂಪದಲ್ಲಿದೆಯೆಂಬುದನ್ನು ವ್ಯಕ್ತಪಡಿಸುತ್ತದೆ. ವಿಶ್ವಕರ್ಮಸೂಕ್ತವು ಪರಮಾತ್ಮ ಜ್ಞಾನನಿಶ್ಚಯವನ್ನು ನಿಸ್ಸಂಧಿಗ್ಧ ರೀತಿಯಲ್ಲಿ ತೋರಿಸುತ್ತಿದ್ದು ಸಕಲ ವೇದಸಮೂಹಕ್ಕೂ ಶಿರೋಮಣಿಯಂತಿರುವುದಲ್ಲದೆ, ವೇದಾಂತ ಜ್ಞಾನವು ಶಿಲ್ಪಜ್ಞಾನದಿಂದ ಬೇರೆಯೆನಿಸಿ ಕವಲೊಡೆದನಂತರ ಪ್ರಖರವಾಗಿ ಬೆಳೆದು ರಮ್ಯವಾಗಿರುವ ಸಕಲ ಉಪನಿಷದ್ಜ್ಞಾನಕ್ಕೂ ತಳಹದಿಯಂತಿರುತ್ತದೆ. ವಿಶ್ವಕರ್ಮ ಸೂಕ್ತದಿಂದ ಬೆಳೆದುದು ವೇದಾಂತ ಜ್ಞಾನವಾದರೂ ಶಿಲ್ಪಿಗಳಿಂದ ಭಿನ್ನರಾದ ಕೇವಲ ಜ್ಞಾನಿಗಳೆಂಬುವರು ಮಾತ್ರ ಅದನ್ನು ಶಿಷ್ಯ ಪರಂಪರೆಯಿಂದ ಬೆಳೆಸಿದರು ಎಂದು ಈಗಿನ ಜನರು ತಿಳಿಯುತ್ತಾರೆಂಬುದು ಅವರ ಜ್ಞಾನಸಂಕೋಚಕ್ಕೆ ನಿದರ್ಶನವೆಂದೇ ಹೇಳಬಹುದು. ಶಿಲ್ಪಿಗಳು ವೇದ ವೇದಾಂತ ಜ್ಞಾನದಲ್ಲಿಯೂ ಶಿಲ್ಪಿಗಳಲ್ಲದ ಕೇವಲ ತತ್ವಶೋಧನೆಯ ಜ್ಞಾನಿಗಳು ಶಿಲ್ಪದಲ್ಲಿಯೂ ನಿಷ್ಣಾತರಾಗಿದ್ದು ಈ ಎರಡು ಗುಂಪೂ ಕವಲೊಡೆದಿದ್ದರೂ ಸಮಾನಸಾಮರಸ್ಯದಿಂದಿದ್ದರು ಎಂಬುದಕ್ಕೆ ಬೃಹದಾರಣ್ಯಕದ ಗುರುಪರಂಪರೆಯೂ ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್—ತೈ.ಸಂ ೨-೫-೧ ತ್ವಷ್ಟೃಪುತ್ರನಾದ ವಿಶ್ವರೂಪಶಿಲ್ಪಿಯು ದೇವತೆಗಳಿಗೆ ಪುರೋಹಿತನಾಗಿ ಯಜ್ಞಯಾಗಾದಿಗಳನ್ನು ಮಾಡಿಸುತ್ತಿದ್ದನು ಎಂಬ ಯಜುರ್ವಾಕ್ಯವೂ, ಅಲ್ಲದೆ ಈ ಎರಡು ಗುಂಪುಗಳಿಗೂ ಬಾಂಧವ್ಯವಿತ್ತು ಎಂಬುದಕ್ಕೆ

ಬೃಹಸ್ಪತೇಸ್ತು ಭಗಿನೀ ವರಸ್ತ್ರೀ ಬ್ರಹ್ಮವಾದಿನೀ ।
ಪ್ರಭಾಸಸ್ಯತು ಸಾ ಭಾರ್ಯಾ ವಸೂನಾಮಷ್ಟಮಸ್ಯ ಹ ।
ವಿಶ್ವಕರ್ಮಾ ಮಹಾಭಾಗ ಸ್ತಸ್ಯಾಂಜಜ್ಞೇ ಪ್ರಜಾಪತಿಃ ॥ ವಿಷ್ಣು ಪು ೧-೫೫

ಪ್ರಜಾಪತಿ ಶಿಲ್ಪಿಯ ತಂದೆಯೂ ಅಷ್ಟವಸುಗಳಲ್ಲೊಬ್ಬನೂ ಆದ ಪ್ರಭಾಸ ಶಿಲ್ಪಿಯು ಬೃಹಸ್ಪತಿಯ ಭಾವನಾಗಿದ್ದನು ಎಂಬ ವಿಷ್ಣುಪುರಾಣ ವಾಕ್ಯವೂ ನಿದರ್ಶನಗಳಾಗಿವೆ. ಅಲ್ಲದೆ ಶಿಲ್ಪಶಾಸ್ತ್ರಕ್ಕೆ ಶಿಲ್ಪಿಗಳೇ ಅಲ್ಲದೆ ತತ್ವಜ್ಞಾನಿಗಳಾದ ಇತರರು ಕೆಲವರೂ ಪ್ರವರ್ತಕರಾಗಿದ್ದರು ಎಂಬುದಕ್ಕೆ

ಭೃಗುರತ್ರಿರ್ವಸಿಷ್ಠಶ್ಚ ವಿಶ್ವಕರ್ಮಾಮಯಸ್ತಥಾ ।
ನಾರದೋ ನಗ್ನಜಿಚ್ಚೈವ ವಿಶಾಲಾಕ್ಷಃ ಪುರಂದರಃ ॥
ಬ್ರಹ್ಮಾ ಕುಮಾರೋ ನಂದೀಶಃ ಶೌನಕೋ ಭರ್ಗ ಏವಚ ।
ವಾಸುದೇವೋ ಅನಿರುದ್ಧಶ್ಚ ತಥಾ ಶುಕ್ರಬೃಹಸ್ಪತೀ ॥
ಅಷ್ಟಾದಶೈತೇ ವಿಖ್ಯಾತಾಃ ಶಿಲ್ಪಶಾಸ್ತ್ರೋಪದೇಶಕಾಃ । —ಮತ್ಸ್ಯ ಪು.

ಈ ವಾಕ್ಯದಲ್ಲಿ ಶಿಲ್ಪೇತರ ತತ್ವಜ್ಞಾನಿಗಳೂ ಸೇರಿರುವುದು, ಬಲವನ್ನು ಕೊಡುತ್ತದೆ.

ಹೀಗೆ ಜ್ಞಾನಕರ್ಮಗಳ ಬ್ರಹ್ಮಜ್ಞಾನ ಶಿಲ್ಪಜ್ಞಾನಗಳ ಸಮನ್ವಯ ಸಂಗಮಗಳಿಂದ ಭಾರತದೇಶವು ಪೂರ್ವಕಾಲದಲ್ಲಿ ಭೌತಿಕವಸ್ತು ಸಮೃದ್ಧಿಯಿಂದಲೂ ಅಧ್ಯಾತ್ಮಜ್ಞಾನ ಸಂಪನ್ನತೆಯಿಂದಲೂ ಈ ಲೋಕದ ಇತರ ಎಲ್ಲ ದೇಶಗಳಿಗಿಂತಲೂ ಸಕಲ ವಿಧದಲ್ಲೂ ಮುಂದಿದ್ದು ಲೋಕಕ್ಕೆ ಉಪದೇಶಮಾಡುವ, ಅದರಂತೆ ನಡೆದು ತೋರುವ ಆಚಾರ್ಯನ ಸ್ಥಾನದಲ್ಲಿ ಇತ್ತು. ಇಂದು ಈ ದೇಶವು ಹೀನಸ್ಥಿತಿಯಲ್ಲಿರಬೇಕಾದರೆ ಆತ್ಮಜ್ಞಾನವನ್ನು ಕೇವಲ ಅಟ್ಟಕ್ಕೇರಿಸಿ ಶಿಲ್ಪಜ್ಞಾನವನ್ನು ಹೀನ ವಿದ್ಯೆಯೆಂದು ಅಲ್ಲಗಳೆದುದರ ಫಲವೇ ಆಗಿದೆ. ಸ್ವಾತಂತ್ರ್ಯ ಸಾಧಿತವಾಗಿರುವ ಈ ಪರ್ವಕಾಲದಲ್ಲಿ ವೇದಕಾಲದಲ್ಲಿಯೂ ಉಪನಿಷತ್ಕಾಲದಲ್ಲಿಯೂ ಇದ್ದಂತೆ ಶಿಲ್ಪವೂ ಆತ್ಮವಿದ್ಯೆಯೂ ಸಮಾನ ಸಮಾನವಾಗಿ ಕೈಜತೆಗೆ ಕೈಗೂಡಿಸಿ ಶ್ರಮಿಸಿದಲ್ಲದೆ ದೇಶಾಭಿವೃದ್ಧಿಯಾಗದು. ಒಬ್ಬರನ್ನೊಬ್ಬರು ಹೀಗಳೆಯುವ ನಿಂದಿಸುವ ನಾವೇ ಶ್ರೇಷ್ಠರೆಂಬ ದುರಹಂಕಾರದ ನೀಚವೃತ್ತಿಯನ್ನು ಬಿಟ್ಟು, ಶಿಲ್ಪವೂ ಆತ್ಮವಿದ್ಯೆಯೂ ಒಂದಕ್ಕೊಂದು ಹೊಂದಿಕೊಂಡಿರುವ ಸಂಬಂಧವನ್ನು ವೇದದ ಮೂಲಕ ತಿಳಿದುಕೊಂಡು ದೇಶಾಭಿವೃದ್ಧಿಗಾಗಿ ಸರ್ವರೂ ಕರ್ಮಪ್ರವೃತ್ತರಾಗಬೇಕು.

## ವೈದಿಕ ಶಿಲ್ಪದ ಹ್ರಾಸ, ದೇವತಾಮೂರ್ತಿಗಳ ಉದಯ

ಇರಲಿ, ಹಿಂದೆ ಹೇಳಿದ ರೀತಿ ಐತರೇಯ ಬೃಹದಾರಣ್ಯಕಗಳಲ್ಲಿಯ ವಾಕ್ಯಗಳಂತೆ ಕಶ್ಯಪ ನಾಭಾನೇದಿಷ್ಟ ವಾಲಖಿಲ್ಯ ಮಯಾದಿ ಶಿಲ್ಪಜ್ಞಾನಿಗಳೂ ವಸಿಷ್ಠ ವಿಶ್ವಾಮಿತ್ರ ಗೌತಮಾದಿ ತತ್ವಜ್ಞಾನಿಗಳೂ ವೇದಕಾಲದಲ್ಲಿ ಸಮಾನ ಸಾಮರಸ್ಯದಿಂದಿದ್ದು ವೇದವನ್ನು ಬೆಳಸಿ, ಅದನ್ನು ಒಂದು ಪೂರ್ಣ ರೂಪಕ್ಕೆ ತಂದು, ಅದು ಜಗದುಪಯೋಗವಾಗುವಂತೆಯೂ ಅದರ ಅನುಷ್ಠಾನದಿಂದ ಜಗತ್ತು ಸನ್ಮಾರ್ಗಗಾಮಿಯಾಗಿ ಸಂಪೂರ್ಣ ಸುಖಶಾಂತಿಯನ್ನು ಅನುಭವಿಸುವಂತೆಯೂ ಮಾಡಿದ್ದರು ಎಂಬದು ನಿರ್ವಿವಾದವಷ್ಟೆ. ಈಚಿಗೆ, ಶಿಲ್ಪಜ್ಞಾನ ತತ್ವಜ್ಞಾನಗಳು ಎರಡಾಗಿ ಒಡೆದ ಕಾಲದಿಂದೀಚಿಗೆ, ವೇದದ ಬೆಳವಣಿಗೆಯೂ ನಿಂತಿತಲ್ಲದೆ ವೇದವು ಕೇವಲ ತತ್ವಜ್ಞಾನವನ್ನು ನಿರೂಪಿಸುವುದಕ್ಕೇ ಹೊರಟದೆಯೆಂಬಂತೆ ಪ್ರಚಾರ ನಡೆದು ಶಿಲ್ಪಜ್ಞಾನವನ್ನು ಹೀನ ವಿದ್ಯೆಯೆಂಬುದಾಗಿಯೂ, ಶಿಲ್ಪಿಗಳನ್ನು ಹೀನ ಕುಲಜರೆಂಬುದಾಗಿಯೂ, ಪುರಾಣ ಕಾವ್ಯ ನಿಘಂಟುಗಳೆಲ್ಲದರಿಂದಲೂ ಜಗತ್ತಿನ ಕಿವಿ ಕಿವುಡಾಗುವಂತೆಯೂ, ಜಗತ್ತಿನ ಕಣ್ಣು ಕಾಣದಂತೆಯೂ ಅಸತ್ಯ ಡಂಗುರವು ಹೊಡೆಯಲ್ಪಟ್ಟು ಶಿಲ್ಪವು ಮೂಲೆಗುಂಪಾಯಿತು. ಇದರಿಂದ ಪುಷ್ಕರ ವಿಮಾನ, ಕಾಮಧೇನು ಕಲ್ಪವೃಕ್ಷಗಳನ್ನು ನಿರ್ಮಿಸುತ್ತಿದ್ದಂಥಾ ಶಿಲ್ಪಿಗಳು ಕಾಣದಂತಾದರು, ಅಲ್ಲಿಂದ ಮುಂದೆ ಹುಟ್ಟದಂತಾದರು. ವೇದವು ಪೂರ್ಣಜ್ಞಾನಿಗಳ ಅಮೃತವಾಣಿ ಎಂಬುದು ಮರೆಯಲ್ಪಟ್ಟು, ಅದು ಅಪೌರುಷೇಯವೆಂಬುದಾಗಿ ತಿಳಿವಳಿಕೆ ಬಂದ

ನಂತರ ಉತ್ತಮ ತತ್ವಜ್ಞಾನಿಗಳೂ ಕೂಡ ಇಲ್ಲದಂತಾಗಿ ಋಷಿಸಮೂಹವೇ ಭರತ ಖಂಡದಿಂದ ಅದೃಶ್ಯವಾದಂತಾಯಿತು. ಮುಂದೆ ಹುಟ್ಟಿದ ಪ್ರತಿಭಾಶಾಲಿ ತತ್ವ ಜ್ಞಾನಿಗಳೆಲ್ಲಾ ತಮ್ಮ ಸತ್ಯಶೋಧನೆಯನ್ನು ಸ್ವತಂತ್ರವಾಗಿ ನಡೆಸಲಾರದವರಾಗಿ ಕೇವಲ ವೇದಗಳಿಗೆ ವ್ಯಾಖ್ಯಾನ ಬರೆಯುವಲ್ಲಿಯೇ ಅವರ ತತ್ವಜ್ಞಾನದ ಮಿತಿ ನಿಂತುಬಿಟ್ಟಿತು. ಅಲ್ಲದೆ ವೇದವು ವಿಭಾಗವಾದನಂತರ ವೇದ ಮಂತ್ರಗಳನ್ನು ಕೇವಲ ಯಜ್ಞ ಯಾಗಾದಿಗಳಿಗಾಗಿಯೇ ವಿನಿಯೋಗಿಸಬೇಕೆಂದು ವೇದ ಮಂತ್ರ ಗಳ ಪ್ರಯೋಜನವನ್ನು ವಿವರಿಸಿ, ಅನೇಕ ವಿಧ ಯಜ್ಞ ಯಾಗಾದಿಗಳನ್ನು ಮಾಡಲು ಉಪಕ್ರಮಿಸಿ, ಅವುಗಳನ್ನು ನಡೆಸುವ ಮಾರ್ಗವೇ ಕರ್ಮಮಾರ್ಗ ವೆಂತಲೂ ಅದನ್ನು ವಿವರಿಸುವ ಮೀಮಾಂಸಾ ಶಾಸ್ತ್ರವೇ ವೈದಿಕ ಕರ್ಮಶಾಸ್ತ್ರ ವೆಂತಲೂ ನಿರೂಪಿಸಿ, ವೇದದ ನಿಜವಾದ ಕರ್ಮದ ಅರ್ಥವನ್ನು ವಿಪರ್ಯಾಸ ಗೊಳಿಸಿಬಿಟ್ಟರು. ಇನ್ನು ಶಿಲ್ಪಿಗಳಾದರೋ ತಮಗೆ ವಿರುದ್ಧ ಧಾಳಿ ಎದ್ದ ಋಷಿ ವಂಶಜರನ್ನು ಎದುರಿಸಿ, ತಾವೂ ಅವರಷ್ಟೇ ಪ್ರಾಶಸ್ತ್ಯವುಳ್ಳವರೆಂಬುದನ್ನು ತಮ್ಮ ಶಿಲ್ಪಕೃತಿಸಾಮರ್ಥ್ಯದಿಂದಲೂ, ವೇದಗಳಲ್ಲಿ ಕಾಣಬರುವ ಶಿಲ್ಪಜ್ಞಾನಿಗಳ ಪರಂಪರೆ ಯಿಂದಲೂ, ತೋರಿಸಲು ಸಮರ್ಥರಾದರೇ ಹೊರತು, ಹೊಸ ಹೊಸ ಸಂಶೋಧನೆ ಗಳನ್ನು ನಡೆಸಿ ನೂತನ ರಚನೆಗಳನ್ನು ಸಾಧಿಸಲು ರಾಜ್ಯದ–ರಾಜರ ಬೆಂಬಲವಿಲ್ಲವೆ ಅವುಗಳನ್ನು ತಮ್ಮ ಸ್ವಂತ ಬಲದಿಂದಲೇ ನಡೆಸಲಾರದೆ ನಿಂತುಬಿಟ್ಟರು. ಆಗಿನ ಕಾಲವ ರಾಜರಾದರೋ ಕೇವಲ ಋಷಿವಂಶಜರ ಬೆಂಬಲಕ್ಕೆ ನಿಂತು ಅವರ ಒಂದೊಂದು ಕವಿತಾ ಚಮತ್ಕಾರಕ್ಕೂ ಲಕ್ಷಾಂತರ ಹೊನ್ನುಗಳನ್ನು ಸಮರ್ಪಿಸಲು ಸಿದ್ಧರಾದರೇ ಹೊರತು ದೇಶಾಭ್ಯುದಯವನ್ನು ಸಾಧಿಸುವ ಶಿಲ್ಪಕಾರ್ಯಕ್ಕೆ ಬೆಂಬಲ ಕೊಡದೇ ಹೋದರು ಎಂಬುದು ಅತ್ಯಂತ ವಿಷಾದದಿಂದ ಲಿಖಿಸಲ್ಪಡಬೇಕಾಗಿದೆ. ಇದರಿಂದ ಶಿಲ್ಪಿಗಳ ಉತ್ಸಾಹಕ್ಕೆ ತಣ್ಣೀರೆರಚಿದಂತಾಗಿ ಸರ್ವಜನಾಭ್ಯುದಯಕ್ಕೆ ಬೇಕಾದ ವಸ್ತುಗಳ ನಿರ್ಮಾಣವು ನಿಂತುಹೋಯಿತಾದರೂ, ಅವರ ಆ ಜ್ಞಾನ ವಿಕಾಸದ ಹಂಬಲವು ಇಂಗಿಹೋಗದುದರಿಂದ, ಆ ಶಿಲ್ಪಿಗಳು ಆಗಿನ ಕಾಲದಲ್ಲಿ ವಿಶೇಷವಾಗಿ ನಡೆಯುತ್ತಿದ್ದ ಯಜ್ಞಕಾರ್ಯಗಳಿಗೆ ಉಪಯುಕ್ತಗಳಾದ ವೇದಿಕೆಗಳು ಹೋಮಕುಂಡಗಳು ಸ್ಫ್ಯಕಪಾಲಾಗ್ನಿಹೋತ್ರಹವಣೀತ್ಯಾದಿ ಯಜ್ಞಪಾತ್ರೆಗಳನ್ನು ನಿರ್ಮಿಸಿಕೊಡುವ ಮೂಲಕವೂ, ಅವುಗಳ ನಿರ್ಮಾಣಕ್ರಮ ಉಪಯೋಗಕ್ರಮ ಗಳನ್ನು ನಿರೂಪಿಸುವ ಶುಲ್ಬಶಾಸ್ತ್ರಗಳನ್ನು ರಚಿಸಿಯೂ ಸಹಾಯಮಾಡಿದರು. ಅಲ್ಲದೆ ದೇಶದಲ್ಲಿ ಆಗಿನ ಕಾಲದಲ್ಲಿ ಭರದಿಂದ ಪ್ರಚಾರವಾಗುತ್ತಿದ್ದ ಪುರಾಣಗಳನ್ನೇ ಅನುಸರಿಸಿ ಮೂರ್ತಿನಿರ್ಮಾಣ ದೇವಾಲಯನಿರ್ಮಾಣಗಳನ್ನು ಮಾಡಲೂ ಉಪಕ್ರಮಿಸಿದರು. ಈ ದೇವಾಲಯ ನಿರ್ಮಾಣಗಳ ಕಾಲಕ್ಕೂ ಹಿಂದಿನ ವೇದಕಾಲದ ಶಿಲ್ಪನಿರ್ಮಾಣಗಳ ಕಾಲಕ್ಕೂ ಮಧ್ಯೆ ಬಹಳ ಅಂತರವೇ ಕಳೆದು

ಹೋಗಿದೆಯಾಗಿ ವೇದಕಾಲದ ಶಿಲ್ಪಕೃತಿಗಳು ಇಂದು ಭರತಭೂಮಿಯಲ್ಲೆಲ್ಲಿಯೂ ಕಾಣ ಸಿಕ್ಕದಂತಾಗಿದೆ. ಆ ಕೃತಿಗಳು ಕಾಣಸಿಕ್ಕದಿದ್ದರೂ ಪುರಾಣಗಳು ಆ ಶಿಲ್ಪ ಕೃತಿಗಳ ಅನೇಕ ಮಹತ್ವಗಳನ್ನು ವರ್ಣಿಸುವುದರಿಂದಲೂ, ವೇದಗಳು ನಿಸ್ಸಂದಿಗ್ಧ ವಾಗಿ ಅವುಗಳನ್ನು ವಿವರಿಸುವುದರಿಂದಲೂ ವೇದಕಾಲದಲ್ಲಿದ್ದ ಶಿಲ್ಪಜ್ಞಾನದ ಮಹತ್ವದ ಬಗ್ಗೆ ನಾವು ಸಂಪೂರ್ಣ ನಂಬಿಕೆಯನ್ನಿಟ್ಟು ಅವರ ಯಶೋವೈಭವದ ಬಗ್ಗೆ ಹೆಮ್ಮೆಪಡಬಹುದಾಗಿದೆ.

## ಶಿಲ್ಪಶಾಸ್ತ್ರಗಳೂ, ದೇವತಾಮೂರ್ತಿನಿರ್ಮಾಣವೂ

ಶಿಲ್ಪಿಗಳು ದೇವತಾಮೂರ್ತಿನಿರ್ಮಾಣ ದೇವಾಲಯ ನಿರ್ಮಾಣಗಳನ್ನು ಮಾಡಲು ಕೈಗೊಂಡನಂತರ ಮೂರ್ತಿನಿರ್ಮಾಣ ಶಾಸ್ತ್ರಗಳನ್ನು ವಿಪುಲವಾಗಿ ಬೆಳೆಸಿದ್ದಾರೆ. ಪುರಾಣಕಾಲಕ್ಕೂ ಈಚೆಗೆ ಶೈವ ವೈಷ್ಣವ ಶಾಕ್ತೇಯಾದಿ ಮತಗಳು ಪ್ರಬಲವಾಗಿ ಬೆಳೆದು ವೇದದೇವತೆಗಳಾದ ಇಂದ್ರ ತ್ವಷ್ಟಾ ಸೋಮ ವರುಣ ಪರ್ಜನ್ಯ ಅಗ್ನಿ ಮೊದಲಾದವುಗಳಿಗಿಂತ ಪುರಾಣ ದೇವತೆಗಳಾದ ಶಿವ ವಿಷ್ಣು ಕಾಲೀ ಇತ್ಯಾದಿ ಮತೀಯ ದೇವತೆಗಳು ಉತ್ತಮೋತ್ತಮಗಳೆಂದು ವರ್ಣಿತಗಳಾಗಿ ಇವೇ ಪ್ರಧಾನ ದೇವತೆಗಳೆಂತಲೂ, ವೈದಿಕ ದೇವತೆಗಳೇ ಅಪ್ರಧಾನ ದೇವತೆಗಳೆಂತಲೂ ಪರಿಗಣಿಸಲ್ಪಟ್ಟು ವೇದದ ಭಾವನೆಗಳೂ ವೈದಿಕ ಜ್ಞಾನವೂ ಬಹುವಾಗಿ ಮಾರ್ಪಾಟು ಹೊಂದಿರುವುದರಿಂದ, ದೇವತಾ ದೇವಾಲಯಾದಿ ನಿರ್ಮಾಣಕ್ರಮಗಳೂ ಕ್ರಮೇಣ ಪರಿಣಾಮಗೊಂಡವು. ಭರತಖಂಡದ ಏಕಮಾತ್ರ ಭಾಷೆಯಾಗಿದ್ದ ಸಂಸ್ಕೃತವು ಕಾಲಕ್ರಮೇಣ ಪರಿವರ್ತನಗೊಂಡು ಅನೇಕ ಭಾಷೆಗಳುದಯಿಸಿ ಪುರಾಣಭೇದ ಮತಭೇದಗಳಂತೆ ಭಾಷಾಭೇದಗಳೂ ಉಂಟಾಗಿ ಈ ಭೇದಗಳಿಂದ ಭರತಖಂಡವು ಮೂರು ಮುಖ್ಯ ಭೇದಗಳಾಗಿ ವಿಭಾಗಗೊಂಡಿತು.

ಹಿಮಾದ್ರಿ ಕನ್ಯಯೋರಂತರ್ಗತೋ ದೇಶಸ್ತು ಭಾರತಃ ।
ಸೋಪಿದೇಶಸ್ತ್ರಿಧಾ ಭಿನ್ನಾ ಸ್ತತ್ತದ್ದೇಶಭವೈರ್ಗುಣೈಃ ।
ಹಿಮವದ್ವಿಂಧ್ಯಯೋ ರ್ಮಧ್ಯಂ ಸಾತ್ವಿಕಂ ಭೂತಲಂ ಸ್ಮೃತಂ ।
ವಿಂಧ್ಯಶೈಲಾದಿ ಕೃಷ್ಣಾಂತಂ ರಾಜಸಂ ಪರಿಕೀರ್ತಿತಂ ।
ಪುನಃ ಕೃಷ್ಣಾದಿ ಕನ್ಯಾಂತಂ ತಾಮಸಂ ಭೂತಲಂ ಭವೇತ್ ।
ನಾಗರ ಸ್ಸಾತ್ವಿಕೋ ದೇಶೋ ವೇಸರೋ ರಾಜಸೋ ಭವೇತ್ ।
ದ್ರಾವಿಡ ಸ್ತಾಮಸೋ ದೇಶಃ ಕ್ರಮೇಣ ಪರಿಕೀರ್ತಿತಾಃ ॥

—ಶಿಲ್ಪರತ್ನ ಅ. ೧೬.

ಹಿಮಾಲಯ ಪರ್ವತದಿಂದ ವಿಂಧ್ಯ ಪ್ರದೇಶದ ವರೆಗೆ ನಾಗರವೆಂತಲೂ, ವಿಂಧ್ಯದಿಂದ ಕೃಷ್ಣಾ ತುಂಗಭದ್ರೆಯವರೆಗೆ ವೇಸರ ದೇಶವೆಂತಲೂ, ಅಲ್ಲಿಂದ ಕನ್ಯಾಕುಮಾರಿಯವರೆಗೆ ದ್ರಾವಿಡ ದೇಶವೆಂತಲೂ ಹೆಸರಾಯಿತು. ಆಯಾ

ದೇಶ ಭಾಗದ ಶಿಲ್ಪವೂ ಕೂಡ ಆಯಾ ದೇಶನಾಮದಿಂದಲೇ ನಿರ್ದೇಶಿತವಾಗಿ ನಾಗರ ಶಿಲ್ಪ, ವೇಸರ ಶಿಲ್ಪ, ದ್ರಾವಿಡ ಶಿಲ್ಪವೆಂಬುದಾಗಿ ಮೂರು ಮುಖ್ಯ ಭೇದಗಳು ದೇವತಾದೇವಾಲಯನಿರ್ಮಾಣಗಳಲ್ಲಿ ಕಂಡು ಬರುವಂತಾಯಿತು. ಕ್ರಮೇಣ ಜೈನರು ಬೌದ್ಧರು ಪ್ರಬಲರಾದಾಗಲೂ, ಮುಸಲ್ಮಾನರು ಈ ದೇಶವನ್ನು ಆಳಿದಾಗಲೂ, ಶಿಲ್ಪನಿರ್ಮಾಣ ಕ್ರಮಗಳು ಅವುಗಳಂತೆಯೇ ಮಾರ್ಪಾಡಾಗಿ ಶಿಲ್ಪವು ಈಚಿಗೆ ಅನೇಕ ವೈಲಕ್ಷಣ್ಯಗಳನ್ನು ಹೊಂದಿದೆ. ಈ ವಿಲಕ್ಷಣಗಳೆಲ್ಲವೂ ಇತ್ತೀಚಿಗೆ ರಚಿತಗಳಾದ ಶಿಲ್ಪಶಾಸ್ತ್ರಗಳಲ್ಲಿ ಕಾಲಕ್ರಮದಿಂದ ತೋರಿಬರುತ್ತಿವೆ.

ಶಿಲ್ಪಶಾಸ್ತ್ರವನ್ನು ಒತ್ತಟ್ಟಿಗಿಟ್ಟು ಭರತಖಂಡದಲ್ಲಿ ಈಗ ಕಂಡುಬರುವ ಶಿಲ್ಪಕೃತಿಗಳನ್ನು ಸ್ಥೂಲವಾಗಿ ಪರೀಕ್ಷಿಸಿದರೆ ಅವನ್ನು ಐದು ಮುಖ್ಯ ರೀತಿಯಾಗಿ ವಿಂಗಡಿಸಬಹುದು. (೧) ಸ್ತೂಪ ಸ್ತಂಭ ಚೈತ್ಯ ವಿಹಾರಾದಿಗಳಿಂದ ಕೂಡಿದ ಗಯಾ ರೀತಿಯ ಬೌದ್ಧ ಶಿಲ್ಪ. (೨) ಎತ್ತರ ಜಗುಲಿಗಳ ಮೇಲೆ ಎತ್ತರವಾದ ವಿಮಾನಗಳಿಂದಲೂ ಶಿಖರಗಳಿಂದಲೂ ಕೂಡಿರುವ ಕಾಶೀ ರೀತಿಯ ಔತ್ತರೇಯ ಶಿಲ್ಪ (೩) ಚಮುರ ಆಕೃತಿಗಳಿಂದ ಅನೇಕ ಅಂತಸ್ತುಗಳಾಗಿ ಗಾತ್ರಕ್ಕೆ ಸಮನಾದ ಎತ್ತರದಿಂದ ಕೂಡಿ ಗೋಪುರ ಶಿಖರ ಕಲಶಗಳಿಂದಿರುವ ಶ್ರೀರಂಗ ಮಧುರೆ ರೀತಿಯ ದ್ರಾವಿಡ ಶಿಲ್ಪ. (೪) ದ್ರಾವಿಡ ಶಿಲ್ಪಕ್ಕಿಂತ ಸ್ವಲ್ಪ ಭಿನ್ನವಾಗಿ ಕಾಣುವ ಕರ್ಣಾಟಕ ರೀತಿಯ ಹೊಯ್ಸಳ ಚಾಲುಕ್ಯ ಶಿಲ್ಪ. (೫) ಟಾಜ್ ಮಹಲ್ ಗೋಲ್‌ಗುಂಬಜ್ ಮೊದಲಾದ ಮುಸ್ಲಿಂ ರೀತಿಯ ಮಿಶ್ರ ಶಿಲ್ಪ. ಇವುಗಳಲ್ಲಿ ಮಿಶ್ರ ಶಿಲ್ಪವನ್ನು ಬಿಟ್ಟರೆ ಮಿಕ್ಕ ಶಿಲ್ಪಗಳು ದೇವತಾ ಮೂರ್ತಿಯನ್ನೇ ಪ್ರಧಾನವಾಗಿ ಉಳ್ಳ ದೇವಾಲಯಗಳು. ಬೌದ್ಧರೀತಿಯ ವಿಗ್ರಹಗಳ ತಾಲಮಾನ ಪ್ರಮಾಣಗಳು ಒಂದು ಸಂಘಟಿತ ರೀತಿಯಲ್ಲಿ ಒಂದೇ ಪ್ರಮಾಣಕ್ಕೆ ಒಳಪಟ್ಟಂತೆ ಇರುತ್ತವೆ. ಮಿಕ್ಕ ಔತ್ತರೇಯ ದ್ರಾವಿಡ ಕರ್ಣಾಟಕ ಶಿಲ್ಪಗಳಲ್ಲಿ ದೇವತಾಮೂರ್ತಿಗಳು ಒಂದೇ ದೇವಾಲಯದಲ್ಲಿಯೇ ಭಿನ್ನ ಭಿನ್ನ ತಾಲಪ್ರಮಾಣಗಳುಳ್ಳವುಗಳಾಗಿ ಕಾಣ ಸಿಕ್ಕುತ್ತವೆ. ಏಕ ತಾಲಗಳಿಂದ ದಶತಾಲಗಳವರೆಗೂ ಉತ್ತಮ ಮಧ್ಯಮ ಅಧಮಗಳಾಗಿ ಸುಮಾರು ೨೦ ವಿಧ ತಾಲಪ್ರಮಾಣಗಳು ಈ ಮೂರ್ತಿ ನಿರ್ಮಾಣಕ್ಕೆ ಆಧಾರವಾಗಿವೆ. ಕನ್ನಡ ನಾಡಿನಲ್ಲಿ ದೊರೆಯುವ ಚಾಲುಕ್ಯ ಶಿಲ್ಪವು, ಔತ್ತರೇಯಕ್ಕೂ ದ್ರಾವಿಡಕ್ಕೂ ಮಧ್ಯಮವೆನಿಸಬಹುದಾದ ಆದರೂ ದ್ರಾವಿಡ ಶಿಲ್ಪವನ್ನೇ ಸ್ವಲ್ಪ ಭಿನ್ನರೀತಿಯಿಂದ ಹೋಲುವ ಜಕ್ಕಣಾಚಾರ್ಯ (ದಕ್ಷಿಣಾಚಾರ್ಯ) ಶಿಲ್ಪವೆಂದು ಪರಿಗಣಿಸಲ್ಪಟ್ಟದೆ. ಮೇಲ್ಕಂಡ ಮುಖ್ಯ ಐದು ವಿಧಗಳಲ್ಲದೆ ಗುಹಾ ಶಿಲ್ಪವೆಂದು ಮತ್ತೊಂದು ವಿಧವನ್ನು ಕಲ್ಪಿಸಬಹುದು. ಇದು ಬೌದ್ಧ ಹಿಂದೂ ಮತಗಳಿಗೆ ಮಾಧ್ಯಮಿಕವಾದ ಅಂಶಗಳನ್ನೊಳಗೊಂಡದ್ದು. ಕಲ್ಲಿನಲ್ಲಿ ಕೊರೆದು ಮಾಡಿರುವ ಆ ರೀತಿಯ ಅನೇಕ ದೇವಾಲಯಗಳು ಬಾದಾಮಿ ಅಜಂತ ಎಲ್ಲೋರ

ಮೇಲುಕೋಟೆ ಇತ್ಯಾದಿ ಸ್ಥಳಗಳಲ್ಲಿ ಇವೆ. ಬೌದ್ಧ ರೀತಿಗಿಂತ ಭಿನ್ನವಾದ ಆದರೆ ಬೌದ್ಧ ರೀತಿಯಂತೆಯೇ ತೋರಿಬರುವ ಜೈನ ದೇವಾಲಯಗಳೂ ಇರುತ್ತವೆ. ಈ ವಿಧದ ಎಲ್ಲ ಶಿಲ್ಪಗಳನ್ನೂ ಶಾಸ್ತ್ರೀಯವಾಗಿ ನಿರೂಪಿಸುವ ಶಿಲ್ಪಶಾಸ್ತ್ರಗಳು ಬಹುಶಃ ಅಪರೂಪ. ಆದರೂ ಔತ್ತರೇಯ ಕರ್ಣಾಟಕ ದ್ರಾವಿಡ ರೀತಿಯ ಶಿಲ್ಪಗಳನ್ನು ವಿವರಿಸುವ ಶಿಲ್ಪ ಶಾಸ್ತ್ರಗಳು ಈಗ ಹೆಚ್ಚು ಕಾಣಸಿಕ್ಕುವುವು. ಅವುಗಳಲ್ಲಿಯೂ ಈಗ ಪ್ರಾಚೀನ ಶಿಲ್ಪಶಾಸ್ತ್ರಗಳೆಂದು ತಿಳಿದಿರುವುವೇ ಸುಮಾರು ೧೦೦೦ ಅಥವಾ ೧೫೦೦ ವರ್ಷಗಳಿಗಿಂತ ಈಚೆಗೆ ರಚಿತವಾದವುಗಳು. ಅವು ಔತ್ತರೇಯ ಕರ್ಣಾಟಕ ದ್ರಾವಿಡವೆಂಬ ಬೇರೆ ಬೇರೆ ರೀತಿಯನ್ನು ಸಮರ್ಥಿಸದೆ ಕೇವಲ ತಾಲಮಾನ ಪ್ರಮಾಣ ರೀತಿಗಳನ್ನು ವಿವರಿಸುವುದರಿಂದ ಎಲ್ಲ ದೇಶೀಯ ಶಿಲ್ಪಗಳಿಗೂ ಆ ಶಿಲ್ಪ ಶಾಸ್ತ್ರಗಳನ್ನು ಅನ್ವಯಿಸಬಹುದಾಗಿದೆ.

ಈಗ ನಮಗೆ ದೊರೆತಿರುವ ಶಿಲ್ಪಶಾಸ್ತ್ರ ಗ್ರಂಥಗಳು ಸುಮಾರು ೩೦೦. ಇವು ಸಂಖ್ಯೆಯಲ್ಲಿ ಇಷ್ಟು ಹೆಚ್ಚಾಗಿ ತೋರಿದರೂ ಗುಣದಲ್ಲಿಯೂ ಶಿಲ್ಪರಚನಾ ವಿಧಾನದಲ್ಲಿಯೂ ಸುಮಾರು ೩೦ ರಿಂದ ೪೫ರ ವರೆಗೆ ಹೆಚ್ಚು ಯೋಗ್ಯತೆಯುಳ್ಳವು. ಅವುಗಳಲ್ಲಿಯೂ ಕಾಶ್ಯಪಶಿಲ್ಪ, ಮಾನಸಾರ, ಸಮರಾಂಗಣಸೂತ್ರಧಾರ, ಶಿಲ್ಪ ರತ್ನ, ಮಯಶಾಸ್ತ್ರ, ವಾಸ್ತುಶಾಸ್ತ್ರ, ವಿಶ್ವಕರ್ಮಸಂಹಿತಾ, ಶಿಲ್ಪಿಸಕಲಾಧಿಕಾರ, ಕಾಶ್ಯಪಸಂಹಿತಾ, ರಾಜವಲ್ಲಭ ಇತ್ಯಾದಿ ಪ್ರಾಚೀನಗ್ರಂಥಗಳು ಗೃಹನಿರ್ಮಾಣ ರಾಜಗೃಹನಿರ್ಮಾಣ, ಯಂತ್ರಶಾಲಾನಿರ್ಮಾಣ, ನಗರನಿರ್ಮಾಣ, ದೇವಾಲಯ ನಿರ್ಮಾಣ, ದೇವತಾಮೂರ್ತಿನಿರ್ಮಾಣ ಇತ್ಯಾದಿ ವಿಷಯಗಳನ್ನು ಆಮೂಲಾಗ್ರ ವಾಗಿ ತಿಳಿಸುತ್ತವೆ. ಮಿಕ್ಕವುಗಳು ಮೃತ್ಸಂಗ್ರಹ, ರತ್ನಪರೀಕ್ಷಾ, ಸ್ವರ್ಣಪರೀಕ್ಷಾ ಆಯನಿರ್ಣಯ ಇತ್ಯಾದಿ ಸಾಮಾನ್ಯ ವಿಷಯಗಳನ್ನು ಹೇಳುವುದರಲ್ಲಿಯೇ ಕೃತ್ಯ ಕೃತ್ಯವಾಗಿವೆಯಾದರೂ ಶಿಲ್ಪಶಾಸ್ತ್ರಾನುಯಾಯಿಗೆ ಅವೂ ಆವಶ್ಯಕವೇ ಆಗಿವೆ. ಹೀಗೆ ಶಿಲ್ಪ ಶಾಸ್ತ್ರಗಳು ಬಹುಮುಖವಾಗಿ ಪ್ರವರ್ಧಮಾನಕ್ಕೆ ಬಂದು ದೇವತಾ ಮೂರ್ತಿ ನಿರ್ಮಾಣವನ್ನು ಒಂದು ವ್ಯವಸ್ಥಿತಮಟ್ಟಕ್ಕೆ ನಿಲ್ಲಿಸಿವೆ.

## ಶಿಲ್ಪಶಾಸ್ತ್ರಗಳೂ, ಪ್ರತಿಷ್ಠಾಶಾಸ್ತ್ರವೂ

ಹೀಗೆ ದೇವತಾಮೂರ್ತಿನಿರ್ಮಾಣ ದೇವಾಲಯನಿರ್ಮಾಣಗಳು ನಡೆದ ನಂತರ ಆ ದೇವಾಲಯಗಳಲ್ಲಿ ಪ್ರತಿಷ್ಠಿತವಾದ ದೇವತಾಮೂರ್ತಿಗಳ ಪೂಜಾಕಾರ್ಯ ಗಳನ್ನು ನಡೆಸಲು ಮೊದಮೊದಲು ಶಿಲ್ಪಿಗಳೇ ನಿಯೋಜಿತರಾಗಿದ್ದರು.

ಶಿಲ್ಪಿನಾ ನಿರ್ಮಿತೋ ದೇವೋ ಸ್ಥಾಪಿತೋ ತೇನ ವೈಪುನಃ।
ಪೂಜಿತ ಶ್ಶಿಲ್ಪಿನಾ ಚೈವ ತಸ್ಮಾತ್ತದ್ದೇವತಾಂಗತಃ॥
ದೇವರೂಪಧರಶ್ಶಿಲ್ಪೀ ಶಿಲ್ಪೀ ದೇವೇತಿ ಚೋಚ್ಯತೇ।
ವಿಜ್ಞೇಯಾ ದೇವತಾಮೂರ್ತಿಃ ಶಿಲ್ಪಕಾರ್ಯೇಣ ಶಿಲ್ಪಿನಾ॥

—ಶಿಲ್ಪರತ್ನಾಕರ

ಕಾಲಾನಂತರ ಶಿಲ್ಪಿಗಳು ಶಿಲ್ಪನಿರ್ಮಾಣ ಕಾರ್ಯಭಾರದಿಂದ ಆ ಕೆಲಸವನ್ನು ಇತರರಿಗೆ ವಹಿಸಿದರು. ಆ ಪೂಜಾಕಾರ್ಯಗಳನ್ನು ವಹಿಸಿಕೊಂಡವರು ಅರ್ಚಕರೆನಿಸಿಕೊಂಡು ಆಯಾ ದೇವತೆಗಳ ನಿತ್ಯಪೂಜಾವಿಧಿ ವಿಶೇಷಪೂಜಾವಿಧಿ ಉತ್ಸವವಿಧಿ ಮುಂತಾದುವನ್ನು ವಿವರಿಸುವ ಆಗಮಶಾಸ್ತ್ರಗಳನ್ನು ರಚಿಸಿಕೊಂಡರು. ಇತ್ತೀಚಿಗೆ ಪ್ರತಿಯೊಂದು ಮತದವರೂ ಶಿಲ್ಪಿಗಳಿಂದ ತಮಗಾಗಿ ದೇವಾಲಯಗಳನ್ನು ಕಲ್ಪಿಸಿಕೊಂಡು ಮೂರ್ತಿಗಳನ್ನು ನಿರ್ಮಿಸಿಕೊಂಡು ಪೂಜೆಯನ್ನು ಮಾಡಿಕೊಳ್ಳಲು ಪ್ರಾರಂಭಿಸಿದರು. ಇದರಿಂದ ಆಗಮಶಾಸ್ತ್ರಗಳಲ್ಲಿ ಕೂಡ ಶೈವ ವೈಷ್ಣವ ಶಾಕ್ತೇಯಾದಿ ಭೇದಗಳುಂಟಾದುವು. ಹೀಗೆ ಆಗಮಶಾಸ್ತ್ರಗಳನ್ನು ರಚಿಸಿದವರು ಕೆಲವರು, ತಮ್ಮ ಅಧಿಕಾರವ್ಯಾಪ್ತಿಯನ್ನು ಮೀರಿ ತಮ್ಮ ತಮ್ಮ ದೇವತೆಗಳು ಹೀಗೆ ಹೀಗೇ ಇರಬೇಕೆಂಬುದಾಗಿ ತಾವೇ ನಿರ್ಧರಿಸಿಕೊಂಡೂ, ಅವುಗಳ ಪ್ರತಿಷ್ಠಾಪನೆಯನ್ನೂ ತಾವೇ ನಡೆಸಿಕೊಳ್ಳಬೇಕೆಂದೂ, ಪ್ರಯೋಗಾನುಭವಕ್ಕೆ ಹೊಂದದ ಶಿಲ್ಪಶಾಸ್ತ್ರಗಳನ್ನು ರಚಿಸಿಕೊಂಡರು. ಇಂತಹ ಶಿಲ್ಪಶಾಸ್ತ್ರಗಳು ಮೂರ್ತಿನಿರ್ಮಾಣಕ್ರಮಕ್ಕೆ ಅಯೋಗ್ಯವೆನಿಸಿವೆ. ಪ್ರತಿಷ್ಠಾಪನಾ ವಿಧಿಯಲ್ಲಿ ಕಂಡುಬರುವ ಇತರ ಹೋಮಾದಿಕಾರ್ಯಗಳನ್ನು ತಾವು ನಡೆಸಿಕೊಳ್ಳಬಲ್ಲವರಾದರೂ ಅಷ್ಟಬಂಧನ ಪ್ರಾಣಪ್ರತಿಷ್ಠಾಪನ, ನೇತ್ರೋನ್ಮೀಲನಾದಿಕಾರ್ಯಗಳನ್ನು ಶಿಲ್ಪಿಗಳಿಂದಲ್ಲದೆ ಇತರರಿಂದ ನಡೆಸಲು ಸಾಧ್ಯವಿಲ್ಲವಾಗಿ ಅವರ ಆ ವಾಕ್ಯಗಳು ಅಸಾರ್ಥಕಗಳಾಗಿವೆ. ಕಾಶ್ಯಪಶಿಲ್ಪಕಾರರೂ, ವಾತುಲಾಗಮಕಾರರೂ ಈ ವಿಷಯದಲ್ಲಿ ನಿಸ್ಸಂದಿಗ್ಧವಾಗಿ ವಿಶ್ವಕರ್ಮಬ್ರಹ್ಮಕುಲೋತ್ಪನ್ನರಾದ ಶಿಲ್ಪಿಗಳೇ ದೇವತಾಮೂರ್ತಿನಿರ್ಮಾಣಕ್ಕೂ ಮೂರ್ತಿಪ್ರತಿಷ್ಠಾಕಾರ್ಯಕ್ಕೂ ಅರ್ಹರೆಂಬುದಾಗಿ ತೀರ್ಮಾನಿಸಿ, ಇತರರು ಆ ಕಾರ್ಯಕ್ಕೆ ಅನರ್ಹರೆಂದೂ ಸೂಚಿಸಿರುತ್ತಾರೆ. ಹೀಗೆ ಶಿಲ್ಪಿಗಳು ದೇವಾಲಯ ನಿರ್ಮಾಣ, ದೇವತಾಮೂರ್ತಿನಿರ್ಮಾಣ, ಅವುಗಳ ಪ್ರತಿಷ್ಠಾಕಾರ್ಯಗಳು ಇವುಗಳನ್ನು ನಡೆಸಿ ಲೋಕದಲ್ಲಿ ಈ ವಿಧದ ಕಾರ್ಯಕ್ರಮಗಳಿಂದ ಜನತೆಗೆ ಸಾತ್ವಿಕ ಮನೋಭಾವವು ಬೆಳೆಯಲು ಶ್ರಮಿಸಿರುತ್ತಾರಲ್ಲದೆ ಶಿಲ್ಪಕರ್ಮವು ಅಭಿವೃದ್ಧಿ ಹೊಂದಲು ಶಿಲ್ಪಶಾಸ್ತ್ರಗಳನ್ನು ರಚಿಸಿ ಲೋಕೋಪಕಾರವನ್ನು ಮಾಡಿರುತ್ತಾರೆ.

## ಶಿಲ್ಪಿಗಳೂ, ಶಿಲ್ಪಶಾಸ್ತ್ರಗಳೂ

ಈ ಶಿಲ್ಪಶಾಸ್ತ್ರಗಳು ಪ್ರಯೋಗ ನಿಪುಣರಾದ ಪ್ರಾಚೀನ ಶಿಲ್ಪವಿದ್ವಾಂಸರುಗಳಿಂದಲೇ ರಚಿತಗಳಾಗಿದ್ದರೂ ಅವುಗಳಲ್ಲಿ ಕೆಲವನ್ನು ಮುದ್ರಿಸಿ ಪ್ರಕಾಶಕ್ಕೆ ತಂದವರು ಕೆಲವರು ಶಿಲ್ಪಿಗಳಲ್ಲದ ಇತರರು. ಆ ಇತರರು ವಿದ್ವಾಂಸರಾಗಿದ್ದರೂ ಕೇವಲ ಭಾಷಾವಿದರಾಗಿ ಶಿಲ್ಪಶಾಸ್ತ್ರಾನಭಿಜ್ಞರೂ ಶಿಲ್ಪಪಾರಿಭಾಷಿಕನಿಪುಣರಲ್ಲದವರೂ ಆದುದರಿಂದ ಕೇವಲ ಭಾಷಾಶುದ್ಧಿಯನ್ನು ಮಾಡುತ್ತೇವೆಂದು ಆ ಗ್ರಂಥಗಳನ್ನು ಪರಿಷ್ಕರಿಸಹೋಗಿ ಶಿಲ್ಪಶಾಸ್ತ್ರವಿದರಾದ, ಸಂಸ್ಕೃತಜ್ಞರಾದ ಪ್ರಯೋಗ

ವಿದರಾದ ಶಿಲ್ಪಿಗಳ ಸಹಾಯವನ್ನು ತೆಗೆದುಕೊಳ್ಳದೆ, ಎಲ್ಲಿಯೋ ಮೂಲೆಯಲ್ಲಿದ್ದ ಸಾಮಾನ್ಯ ಶಿಲ್ಪಿಗಳನ್ನು ವಿಚಾರಿಸಿ, ಅವರ ಅನಭಿಜ್ಞತೆಯನ್ನು ತೆಗಳುವ ನೆವದಲ್ಲಿ ಒಟ್ಟು ಶಿಲ್ಪಿಸಮೂಹವನ್ನೇ ಗೀರ್ವಾಣಭಾಷಾವಿದರಲ್ಲವೆಂದೂ ಶ್ರೇಷ್ಠರಲ್ಲವೆಂದೂ ಹೀಯಾಳಿಸಿಬಿಟ್ಟು, ತಮ್ಮ ಅಹಂಕಾರವನ್ನು ಪ್ರದರ್ಶಿಸಿಕೊಂಡವರಾಗಿ ಒಂದೊಂದು ಶಬ್ದಕ್ಕೆ ಒಂದೊಂದು ಅಥವಾ ಎರಡುಮೂರು ಅರ್ಥಗಳನ್ನು ಕೊಡುತ್ತಿದ್ದ ಶಬ್ದಗಳನ್ನು ವ್ಯಾಕರಣ ಶುದ್ಧವಾಗಿ ಮಾಡುತ್ತೇವೆಂದು ಬದಲಾಯಿಸಿ, ಶಿಲ್ಪ ಪಾರಿಭಾಷಿಕ ಶಬ್ದಗಳ ವೈಜ್ಞಾನಿಕ ಅರ್ಥವನ್ನು ತಿಳಿಯಲಾರದೆ ಶಿಲ್ಪಶಬ್ದಗಳನ್ನೇ ಕೆಡಿಸಿಬಿಟ್ಟು ಪ್ರಯೋಗಕ್ಕೂ ಅರ್ಥವಿವರಣೆಗೂ ಅನುಪಯುಕ್ತವಾಗುವಂತೆ ಮಾಡಿಬಿಟ್ಟಿರುತ್ತಾರೆ. ಶಿಲ್ಪಶಾಸ್ತ್ರಗಳನ್ನುದ್ಧರಿಸುತ್ತೇವೆಂದು ಹೇಳಿಕೊಂಡು ಸರ್ಕಾರದ ಸಹಾಯ ದ್ರವ್ಯಗಳ ಅರ್ಜನೆಗಾಗಿ ಶಿಲ್ಪಶಾಸ್ತ್ರಗಳನ್ನು ಪ್ರಕಟಿಸಿದ ಅವರು ಲೋಕೋಪಕಾರಕ್ಕೆ ಬದಲಾಗಿ ಲೋಕಾಪಕಾರವನ್ನೇ ಮಾಡಿರುವರೆಂದರೆ ಅದೇನೂ ಕಠಿನವಾದ ಟೀಕೆಯಾಗಲಾರದು. ಇನ್ನು ಶಿಲ್ಪಿಗಳು ತಮ್ಮಲ್ಲಿರುವ ಅನೇಕ ಶಿಲ್ಪ ಗ್ರಂಥಗಳನ್ನು ಹೊರತೆಗೆಯದೆ, ಸರ್ಕಾರದ ಸಹಾಯ ದ್ರವ್ಯವನ್ನು ಹೊಂದಿಯಾದರೂ ಪ್ರಕಟಿಸಬೇಕೆಂದು ಅಪೇಕ್ಷೆಪಡದೇ ಹೋಗಿ ಶಿಲ್ಪಶಾಸ್ತ್ರಗಳನ್ನು ಹಾಳು ಮಾಡಿರುತ್ತಾರೆ. ಶಿಲ್ಪಿವಂಶಜರಾದ ಕೆಲವರು ತಮ್ಮಲ್ಲಿದ್ದ ಉದ್ದಾಮ ಗ್ರಂಥಗಳ ಯೋಗ್ಯತೆಯನ್ನರಿಯದೆ ಅವುಗಳನ್ನು ವಿದ್ವಾಂಸರಾದ ಶಿಲ್ಪಿಗಳಿಗೆ ತೋರಿಸದೆ ನಾಲ್ಕಾರು ಕಾಸುಗಳಿಗೆ ಮಾರಿಬಿಟ್ಟು ಹಲವು ಶಿಲ್ಪಶಾಸ್ತ್ರಗಳನ್ನು ಕೊಂದುಬಿಟ್ಟಿರುತ್ತಾರೆಂದು ಹೇಳಲು ದುಃಖವಾಗುತ್ತದೆ. ಪ್ರಯೋಗಾನುಭವ ಶಾಸ್ತ್ರಾನುಭವಗಳನ್ನು ಹೊಂದಿರುವ ಶಿಲ್ಪಿಗಳಾದರೋ ತಮ್ಮ ಮಕ್ಕಳು ಅಥವಾ ಸಂಬಂಧಿಕರುಗಳಿಗೆ ಮಾತ್ರವೇ ಕಲಿಸಹೋಗಿ ಅವರು ಬುದ್ಧಿವಂತರಾಗದೇ ಹೋದರೂ ಅವರ ಜತೆಯಲ್ಲಾದರೂ ಮೇಧಾವಂತರಾದ ಇತರ ಸ್ವಮತೀಯರಿಗಾದರೂ ಕಲಿಸಬೇಕೆಂಬ ಅಪೇಕ್ಷೆಯಿಂದ ದೂರರಾಗಿ ಶಿಲ್ಪಶಾಸ್ತ್ರಗಳನ್ನು ಬೆಳೆಯಗೊಡಿಸದೇ ಹೋಗಿರುತ್ತಾರೆ. ಸರ್ಕಾರದ ಸಹಾಯ ಸೌಲಭ್ಯ, ರಾಜಾಶ್ರಯ, ಸ್ವಯಮೇವ ಶಿಲ್ಪಶಾಸ್ತ್ರಾಭಿರುಚಿ—ಪಾಂಡಿತ್ಯಗಳನ್ನು ದೈವಕೃಪೆಯಿಂದ ಹೊಂದಿದ್ದರೂ ಕೆಲವು ಅಹಂಮಾನ್ಯ ಶಿಲ್ಪಿಗಳು ಇತರ ವೇದಶಾಸ್ತ್ರ ಪುರಾಣಗಳನ್ನು ಪ್ರಕಟಿಸುವ ಅದರಿಂದ ಗೌರವ ಸಂಪಾದಿಸುವ ಹವ್ಯಾಸಕ್ಕೆ ಬಲಿಬಿದ್ದು, ಶಿಲ್ಪಶಾಸ್ತ್ರಗಳ ಪ್ರಕಟನೆಯನ್ನು ಕಡೆಗಣಿಸಿರುತ್ತಾರೆಂದರೆ, ವೇದಶಾಸ್ತ್ರಪುರಾಣಗಳಲ್ಲಿ ಕಂಡುಬರುವ ಶಿಲ್ಪ ವಿಷಯಗಳನ್ನಾದರೂ ಪ್ರಕಟಿಸಲು ಅವರಿಗೆ ಮನಸ್ಸು ಬಾರದೆಂದರೆ, 'ಯೇನಕೇನ ಪ್ರಕಾರೇಣ' ವಾದರೂ ಶಿಲ್ಪಶಾಸ್ತ್ರಗಳನ್ನು ಹೊರಗಿಟ್ಟ ಆ ಇತರ ವಿದ್ವಾಂಸರೇ ಶಿಲ್ಪಿಗಳ ಕೃತಜ್ಞತೆಗೆ ಪಾತ್ರರೆಂದು ಕೊಂಡಾಡಬೇಕಾಗಿದೆ. ಆ ಶಿಲ್ಪಶಾಸ್ತ್ರ ಗ್ರಂಥಗಳನ್ನು ವಿದ್ವಾಂಸರಾದ ಶಿಲ್ಪಿಗಳು ಶ್ರಮವಹಿಸಿ ಪರಿಶೋಧಿಸಿ ಪ್ರಕಟಿಸಲು ಪ್ರಯತ್ನಿಸಿದರೆ ಅದೇನೂ ಅಷ್ಟು ಕಷ್ಟವಾಗಲಾರದು. ಆದರೆ ಎಲ್ಲ ಶಿಲ್ಪಗ್ರಂಥಗಳೂ

ಪ್ರಕಾಶಕ್ಕೆ ಬಂದುದು ಆ ಇತರರಿಂದಲೇ ಏನಲ್ಲ. ಶಿಲ್ಪಿಗಳೂ ಕೂಡ ಅನೇಕರು ಶಿಲ್ಪಶಾಸ್ತ್ರಗಳನ್ನು ಪರಿಷ್ಕರಿಸಿ ಪ್ರಕಟಿಸಿರುತ್ತಾರೆ. ಸರ್ಕಾರದವರೂ ಕೂಡ ಅನೇಕ ಶಿಲ್ಪಶಾಸ್ತ್ರಗಳನ್ನು ಪ್ರಸಿದ್ಧ ಶಿಲ್ಪಿಗಳಿಂದ ಪರಿಷ್ಕರಿಸಿ ಪ್ರಕಟಿಸಿಯೂ ಇರುತ್ತಾರೆ. ಇನ್ನೂ ಕೂಡ ಪ್ರಕಟಿಸಬೇಕಾದ ಗ್ರಂಥಗಳು ತಾಳಪತ್ರಗಳಲ್ಲಿ ಬೇಕಾದಷ್ಟಿವೆ ಯೆಂಬುದು ಆಂಧ್ರದೇಶದ ನಮ್ಮ ಪ್ರವಾಸ ಕಾಲದಲ್ಲಿ ತಿಳಿದುಬಂದಿದೆ. ಶಿಲ್ಪ ವಿದ್ವಾಂಸರೂ ಶಿಲ್ಪಿಗಳೂ, ಈ ಕಡೆ ಗಮನಕೊಟ್ಟು ಶಿಲ್ಪ ಸಂಘಗಳನ್ನೇರ್ಪಡಿಸಿ, ಆ ಮೂಲಕ ಶಿಲ್ಪ ಗ್ರಂಥಗಳನ್ನು ಪ್ರಕಟಿಸಲು ಮನಸ್ಸುಮಾಡಿದರೆ ನಿಜವಾಗಿಯೂ ಶಿಲ್ಪಶಾಸ್ತ್ರವು ಅಭಿವೃದ್ಧಿಯನ್ನು ಹೊಂದುವುದು.

## ಶಿಲ್ಪದ ಬಗ್ಗೆ ದೇಶದ ಕರ್ತವ್ಯ

ವೈದಿಕ ಶಿಲ್ಪಿಗಳ ವಂಶಜರು ತಾವೆಂದೆನ್ನಿಸಿಕೊಂಡ ಇಂದಿನ ಶಿಲ್ಪಿಗಳು ಹಿಂದೆ ಹೇಳಿದ ವಿರಾಟ್‌ಶಿಲ್ಪದ ಜ್ಞಾನವನ್ನು ಎಷ್ಟು ಜನ ಪಡೆದವರಾಗಿದ್ದಾರೆ. ಅಂದು ನಡೆಸಿದಂತಹ ಕೃತಿಗಳನ್ನು ನಿರ್ಮಿಸಿ ಲೋಕವನ್ನು—ಬೇಡ ಭಾರತವನ್ನು —ಮುನ್ನಡೆಯಿಸುವವರಾಗಿದ್ದಾರೆ. ಆದರೂ ಈ ಹೊತ್ತೂ ವೈಶ್ವಕರ್ಮಣ ಶಿಲ್ಪಿಗಳ ಸಹಕಾರವಿಲ್ಲದೆ ದೇಶದ ಕೈಗಾರಿಕೆಗಳೂ ಕಲಾಕೃತಿಗಳೂ ಅಭಿವರ್ಧಿಸಲಾರವು. ಆ ವೇದೋಕ್ತಶಿಲ್ಪದ ಪಾಂಡಿತ್ಯದ ಅಭಾವವಿದ್ದರೂ ಇಂದೂ ಆ ಮಹಾಮಹಿಮರ ರಕ್ತದಪರಂಪರೆಯನ್ನು ತಮ್ಮ ಧಮನಿಗಳಲ್ಲಿ ತುಂಬಿಕೊಂಡು ಅವಕಾಶ ಸಿಕ್ಕಿದರೆ, ಪ್ರೋತ್ಸಾಹ ದೊರೆತರೆ, ವಿದ್ಯಾಭ್ಯಾಸ ಕೊಡಿಸಿದರೆ, ವಾತಾವರಣ ಕಲ್ಪಿಸಿದರೆ ಆ ಕೌಶಲ್ಯವನ್ನು ತೋರಿಸಿ ಶಿಲ್ಪಗಳನ್ನು ನಿರ್ಮಿಸಬಲ್ಲ ಕೆಲಸಗಾರರೂ ಕಲಾವಿದರೂ ಮೇಧಾವಿಗಳೂ ಇಂದೂ ದೊರೆಯುವರು. ಸರ್ಕಾರದವರು ತಮ್ಮ ದೇಶಾಭಿವೃದ್ಧಿ ಕಾರಕ ವಿದ್ಯಾಗಾರಗಳಲ್ಲಿ ಜನ್ಮಶಿಲ್ಪಿಗಳಿಗೆ ಪ್ರೋತ್ಸಾಹಕೊಡದೇ ಹೋದರೆ, ಪ್ರಾಚೀನ ಶಿಲ್ಪಗ್ರಂಥಗಳನ್ನು ಬೆಳಕಿಗೆ ತರದೇಹೋದರೆ, ಸಂಸ್ಕೃತ ಶಾಲೆಗಳಲ್ಲಿ ಶಿಲ್ಪ ಶಾಸ್ತ್ರಾಧ್ಯಯನಗಳಿಗೆ ಅವಕಾಶ ಕಲ್ಪಿಸದೇ ಹೋದರೆ, ಸ್ವಾತಂತ್ರ್ಯ ಪ್ರಾಪ್ತಿಗಾಗಿ ಶ್ರಮಿಸಿದ ಹೋರಾಟವು ವ್ಯರ್ಥವಾಗಿ, ದೇಶವು ತನ್ನ ಹೆಜ್ಜೆಯನ್ನು ಹಿಂದಕ್ಕಿಟ್ಟಂತಾ ಗುವುದು. ಸರಕಾರದ ಮನಸ್ಸನ್ನು ತಿರುಗಿಸಲು ಶಿಲ್ಪಿಗಳಿಗೆ ರಾಜಕೀಯ ವರ್ಚಸ್ಸು ಸಾಲದಿರಬಹುದು. ದೇಶದ ಜನತೆಯು ಪಕ್ಷಪಂಗಡ ಜಾತಿ ಕೋಮುಗಳ ರಾಜ ಕೀಯ ಕೈವಾಡವನ್ನು ಮಾತ್ರ ಲಕ್ಷಿಸುವುದನ್ನು ಬಿಟ್ಟು, ದೇಶ ಹಿತಕ್ಕೆ ಅವಸರವಾದ ಶಿಲ್ಪಾಭ್ಯುದಯಕ್ಕೆ ತಕ್ಕ ಚಳುವಳಿಯನ್ನು ನಡೆಸಿದರೆ ದೇಶೋನ್ನತಿಯ ಮುಂಬೆ ಳಗು ಕಾಣುವಂತಾಗುವುದು. ಇದನ್ನು ಎಲ್ಲರೂ ಮನನ ಮಾಡಬೇಕು.

ಈಗಲೂ ದೇಶಾಭ್ಯುದಯವನ್ನು ಮನಸ್ಸಿನಲ್ಲಿಟ್ಟು ನಮ್ಮ ಪೂರ್ವಿಕ ಸಂಸ್ಕೃತಿಯ ಹಿನ್ನೆಲೆಯ ಮೇಲೆ ದೇಶದ ಪುನರ್ರಚನೆಯನ್ನು ಮಾಡಬೇಕೆಂದು

ಶ್ರಮಿಸುತ್ತಿರುವ ನಮ್ಮ ದೇಶ ಮುಖಂಡರುಗಳು, ಭಾರತೀಯ ಸಂಸ್ಕೃತಿಯನ್ನು, ವಿಶ್ವವೇ ಅದರ ಅನುಯಾಯಿಯಾಗಬೇಕೆಂದು ತವಕಪಡುತ್ತಿರುವಂತಹ ಮಹತ್ವ ಯುತವಾಗುವಂತೆ, ರೂಪಿಸಿರುವ ಭಾರತೀಯ ಪ್ರಾಚೀನ ಶಿಲ್ಪವನ್ನು ಅಭಿವೃದ್ಧಿ ಪಡಿಸಲು ಮನಸ್ಸುಮಾಡಿ ಆ ಪ್ರಾಚೀನಶಿಲ್ಪದ ಭವ್ಯ ತಳಹದಿಯ ಮೇಲೆ ದೇಶ ಪುನರ್ರಚನೆಯನ್ನು ಕೈಗೊಳ್ಳುವುದಾದರೆ ಅವರ ಆ ಪ್ರಯತ್ನವು ಸಾರ್ಥಕಹೊಂದು ವುದು. ಶಿಲ್ಪಿಗಳೂ ಕೂಡ ದೇಶದ ಜನತೆಗೂ ಮುಖಂಡರಿಗೂ ಈ ವಿಷಯವನ್ನು ಬಹುಮುಖವಾಗಿ ಪ್ರಚಾರಮಾಡಿ ತಿಳಿಸಿ ಈಗೀಗ ಅವರು ಪ್ರಾಚೀನ ಶಿಲ್ಪಶಾಸ್ತ್ರ ಗಳನ್ನು ಅಭಿಮಾನದಿಂದ ನೋಡುತ್ತಿರುವ ಉಚಿತ ಸಂದರ್ಭದಲ್ಲೇ ಶಿಲ್ಪಶಾಸ್ತ್ರಾಭಿ ವೃದ್ಧಿ ಪ್ರಯತ್ನಗಳನ್ನೂ ಕೈಗೊಳ್ಳುವಂತೆ ಅವರುಗಳನ್ನು ಒತ್ತಾಯಪಡಿಸಬೇಕಾ ಗಿರುತ್ತದೆ.

ಪ್ರಕೃತ ಈ ಮಹಾಪ್ರಯತ್ನದ ಅಲ್ಪ ಅಂಗವಾಗಿ ಕಾಶ್ಯಪಶಿಲ್ಪವನ್ನು ಸಂಪೂರ್ಣವಾಗಿ ಪ್ರಕಟಿಸಬೇಕೆಂಬ ಅಪೇಕ್ಷೆ ನಮಗಿದ್ದರೂ ಈ ಕಾರ್ಯಕ್ಕೆ ವಿಪುಲವಾಗಿ ದ್ರವ್ಯವು ಅವಶ್ಯಕವಾಗಿರುವುದರಿಂದ ಅದನ್ನು ಮಾನಸಿಕಮಾಡಿ, ದ್ರವ್ಯವು ಶೇಖರವಾದಾಗ ಅಥವಾ ಶಿಲ್ಪಿಗಳ ಬೇಡಿಕೆಯಾಗಲಿ ಸರ್ಕಾರದವರ ಸಹಾಯವಾಗಲಿ ದೊರೆತ ಕೂಡಲೆ ಪ್ರಕಟಿಸುವುದೆಂದು ಸಂಕಲ್ಪಿಸಿ, ಸೂಚಕ ರೀತಿಯಲ್ಲಿ, ಕಾಶ್ಯಪಶಿಲ್ಪದ ಒಂದು ಭಾಗವಾದ ಪ್ರತಿಷ್ಠಾವಿಧಿಯನ್ನು ಮಾತ್ರ ಸಪ್ರಯೋಗವಾಗಿ ಸಂಪಾದಿಸಿ ಪ್ರಕಟಿಸಿರುತ್ತೇವೆ. ಸಾರಗ್ರಹಣತತ್ಪರರಾದ ಸುಧೀಮಣಿಗಳು ನಮ್ಮ ಈ ಪ್ರಯತ್ನದಿಂದ ಸಂತೋಷಗೊಳ್ಳುವರಾದರೆ ಇದು ಸಾರ್ಥಕವಾದಂತೆ ಭಾವಿಸುತ್ತೇವೆ. ವಿದ್ವಾಂಸರಾದ ಶಿಲ್ಪಿಗಳಾದರೋ ಈ ಗ್ರಂಥ ವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ದೋಷಗಳನ್ನು ತೋರಿಸಿಕೊಟ್ಟು ಮುಂದಿನ ಮುದ್ರಣದಲ್ಲಿ ಸರಿಪಡಿಸಲು ಅವಕಾಶ ಕಲ್ಪಿಸಬೇಕೆಂದು ಪ್ರಾರ್ಥಿಸುತ್ತೇವೆ.

ಅಖಿಲಲೋಕಶಿಲ್ಪಿಯೂ, ನಿಖಿಲದೇವಸ್ವರೂಪನೂ, ಸಕಲಜೀವಪಿತಾ ಮಹನೂ, ಸಮಸ್ತಕರ್ಮಕಾರಣಮೂರ್ತಿಯೂ ಆದ ಶ್ರೀ ವಿಶ್ವಕರ್ಮನು ಈ ಸೇವಾರೂಪವಾದ ಗ್ರಂಥಪ್ರಕಟನಾ ಕೈಂಕರ್ಯದಿಂದ ಪರಮಪ್ರೀತನಾಗಿ ನಿತ್ಯಜ್ಞಾನಾನುಗ್ರಹವನ್ನುಂಟುಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಇಂತು
ಸುಧೀಜನ ಪಾದರೇಣು
ಮ. ಗಂಗಾಧರಮೂರ್ತಿ.

## ಶುದ್ಧ ಪಾಠ

| ಪುಟ | | ಪಂಕ್ತಿ | |
|---|---|---|---|
| ೭ | — | ೨೬ | ಅಗ್ನಿಸ್ಸಪ್ತಿಂ |
| ೮ | — | ೬ | ಅತಿಥಿರ್ನಿರೀಶಿರಾ |
| ೧೨ | — | ೧೩ | ಪೂರ್ಣಕುಂಭ |
| ೧೩ | — | ೧೦ | ಮಿಷ ಆಪದೇ |
| ೧೬ | — | ೧೫ | ಇತ್ಯಾಹಕ್ಸ್ವರ್ಮೇಏತಾ |
| ೩೦ | — | ೨೮ | ವಿಶ್ವತಶ್ಚಕ್ಷುರುತ |
| ೩೩ | — | ೧-೩ | ಋಗ್ಯಜುಸ್ಸಾಮಾಥರ್ವಪ್ರಣವಾ ಶ್ಛಂದಾಂಸಿ ಬ್ರಹ್ಮವಿಷ್ಣುಮಹೇಶ್ವರೇಂದ್ರಸೂರ್ಯಾತ್ಮಕಃ ಶ್ರೀ ವಿಶ್ವಕರ್ಮಾ ದೇವತಾ ಕ್ರಿಯಾ ಮಯುವಪುಃ ಪ್ರಾಣಾಖ್ಯಾಶ್ಶಕ್ತಯಃ ಓಂ ಬೀಜಂ ಹ್ರೀಂ ಶಕ್ತಿಃ ಕ್ರೋಂ ಕೀಲಕಂ ಆಸ್ಯಾಂ ಮೂರ್ತೌ |
| ೩೩ | — | ೧೧ | ಶ್ರೋತ್ರ |
| ೩೫ | — | ೮ | ವಿಷ್ಣುಕ್ರಾಂತಾಪದ್ಮ |
| ೪೫ | — | ೧೨ | ವೇದಮಂತ್ರಾನುಪೂರ್ವಕಂ |
| ೪೬ | — | ೩೨ | ವಿಶೇಷತಃ |




# ಸಮಸ್ತ ದೇವತಾ ದೇವಾಲಯಾದೀನಾಂ ಪ್ರತಿಷ್ಠಾವಿಧಿಃ

## ದೇವತಾಮೂರ್ತಿ ನಿರ್ಮಾಣಃ

### ಆದೌ ಸಂಕಲ್ಪಃ

ಅಥ ಯಜಮಾನಃ ಶುಭೇ ದಿನೇ ಚಂದ್ರತಾರಾಬಲಯುಕ್ತೇ ಸುಮುಹೂರ್ತೇ ಸ್ನಾತ್ವಾಽಚಮ್ಯ ಪವಿತ್ರಪಾಣಿ ರ್ಭೂತ್ವಾ, ದೇಶಕಾಲೌ ಸ್ಮೃತ್ವಾ, ಅಮುಕ ಪ್ರವರಾನ್ವಿತೋ ಅಮುಕ ಗೋತ್ರೋತ್ಪನ್ನೋ ಅಮುಕ ಶರ್ಮಾಹಂ........ಅಮುಕ ಶರ್ಮಣಃ ಮಮ ಸಹಕುಟುಂಬಾನಾಂ ಸಹಬಂಧು ಮಿತ್ರ ದಾಸದಾಸೀ ಪಶೂನಾಂ ಚ ಕ್ಷೇಮಸ್ಥೈರ್ಯ ವೀರ್ಯ ವಿಜಯಾಯುರಾರೋಗ್ಯತಾ ಸಿದ್ಧ್ಯರ್ಥಂ ಮಮ ಜನ್ಮ ಲಗ್ನವಶಾತ್ ನಾಮಲಗ್ನವಶಾತ್ ಹೋರಾತ್ ದ್ರೇಕ್ಕಾಣವಶಾತ್ ನವಾಂಶವಶಾತ್

ದ್ವಾದಶಾಂಶವಶಾತ್ ತ್ರಿಶಾಂಶವಶಾತ್ ಮಹಾದಶಾದಿವಶಾತ್ ಅಂತರ್ದಶಾದಿ ವಶಾತ್ ಅಂತರಂತರ್ದಶಾದಿವಶಾತ್ ಲಗ್ನ ಚಂದ್ರಾದಿ ದ್ವಾದಶರಾಶಿಷು ಯೋ ಯೋ ಗ್ರಹಃ ಯತ್ರ ಯತ್ರ ಸ್ಥಿತಸ್ತಸ್ಮಾತ್ ಯೋ ಅರಿಷ್ಟ ಸ್ಸೂಚಿತಃ ಪಿತೃಗಂಡ ಮಾತೃಗಂಡ ಪತ್ನೀಪುತ್ರಪಶುಧನಧಾನ್ಯ ಗಂಡಾದ್ಯರಿಷ್ಟಃ ತತ್ಪರಿಹಾರಾರ್ಥಂ ಮಮ ಕುಟುಂಬಸ್ಯ ಕುಲಸ್ಯ ರಾಷ್ಟ್ರಸ್ಯ ರಾಷ್ಟ್ರಾಧಿಪತೇಶ್ಚ ಕ್ಷೇಮಾದ್ಯಭಿವೃದ್ಧ್ಯರ್ಥಂ ಅತಿವೃಷ್ಟ್ಯನಾವೃಷ್ಟಿ ಮಹೋತ್ಪಾತ ದುರ್ಭಿಕ್ಷ ಸಾಂಘಾತಿಕ ಸಾಮುದಾಯಿಕ ಲತ್ತ ಭೂಕಂಪ ಧೂಮಕೇತ್ವಾದಿ ದರ್ಶನೇತ್ಯಾದೀನಾಂ ಸರ್ವಾಪದ್ಭಯಂಕರಾರಿಷ್ಟಾನಾಂ ನಿರಾಸಾರ್ಥಂ ಚ ಶಿಲ್ಪಶಾಸ್ತ್ರೋಕ್ತ........ದೇವತಾ ಪ್ರತಿಷ್ಠಾಪನಂ (ಗೋಪುರ ಪ್ರಾಕಾರ ದ್ವಾರಪಾಲಕ ಅಧಿಪ್ರತ್ಯಧಿಪರಿವಾರ ದೇವತಾಸಮೇತ ದೇವಾಲಯಪ್ರತಿಷ್ಠಾಪನಂ ಚ) ಕರಿಷ್ಯೇ ಇತಿ ಸಂಕಲ್ಪ್ಯ, ಶಿಲ್ಪಿವರಣಂಕುರ್ಯಾತ್ ॥

ಕಾ. ವಿ. ದೇವರು ಸಮೇತವಾದ ದೇವಾಲಯವನ್ನಾಗಲಿ, ಅಥವಾ ದೇವರ ಬಿಂಬವನ್ನಾಗಲಿ ಪ್ರತಿಷ್ಠಾಪಿಸಿ ಪೂಜೋತ್ಸವಾದಿಗಳು ಸದಾಕಾಲ ನಡೆಯುವಂತೆ ಏರ್ಪಡಿಸಬೇಕೆಂಬ ಉದ್ದೇಶವುಳ್ಳ ಯಾವನಾದರೂ ಮೊದಲು ಯಾವ ಕಾರಣಕ್ಕಾಗಿ ಅಂದರೆ ತನ್ನ ಜಾತಕಾನುಗುಣ್ಯವಾಗಿ ಬರುವ ಜನ್ಮಾಂತರ ಪಾಪದೋಷಶಮನಾರ್ಥವಾಗಿ ಅಥವಾ ಪುಣ್ಯ ಸಂಗ್ರಹಾರ್ಥವಾಗಿ ಯಾಗಲಿ ಯಾವ ಉದ್ದೇಶವಿದೆಯೋ ಆ ಕಾರಣಕ್ಕಾಗಿ ಈ ದೇವತಾ ಪ್ರತಿಷ್ಠಾಪನೆಯನ್ನು ನೆರವೇರಿಸುತ್ತೇನೆಂದು ಸಂಕಲ್ಪ ಮಾಡಬೇಕು.

ಶುದ್ಧವಾದ ಸ್ಥಳದಲ್ಲಿ ಪೀಠದ ಮೇಲೆ ಸ್ನಾನ ಶುಚಿರ್ಭೂತನಾಗಿ ಕುಳಿತು ಪವಿತ್ರಪಾಣಿಯಾಗಿ ಆಚಮನಮಾಡಿ, ಪ್ರಾಣಾಯಾಮ ದೇಶಕಾಲ ಸಂಕೀರ್ತನ ಮಾಡಿ ವಿಧ್ಯುಕ್ತವಾಗಿ ಸಂಕಲ್ಪಿಸಬೇಕು.

## ಶಿಲ್ಪಿವರಣಂ

ತತೋ ಯಜಮಾನೋ ನೂತನವಸ್ತ್ರ ಗಂಧಮಾಲ್ಯಾಲಂಕಾರವಸ್ತು ಪೂರ್ಣ ಕುಂಭ ಫಲಾಕ್ಷತ ಮಂಗಳಸಂಭಾರ ಸುವಾಸಿನೀಭಿ ಸ್ಸಮೇತೋ ವೇದಘೋಷ ಮಂಗಳವಾದ್ಯೈಃ .ಶಿಲ್ಪಿಗೃಹಂ ಪ್ರವಿಶ್ಯ, ತತ್ರ ವೃದ್ಧಂ ಕುಟುಂಬಿನಂ ಶಿಲ್ಪಶಾಸ್ತ್ರ ಜ್ಯೋತಿಶ್ಶಾಸ್ತ್ರ ವೇದೋಪನಿಷದಾದಿ ಸಕಲವಿದ್ಯಾವಿದಂ ವೈಶ್ವಕರ್ಮಣ್ಯತೇಜೋ ವಿರಾಜಿತಂ ಶ್ರೌತಸ್ಮಾರ್ತನಿತ್ಯಕರ್ಮಾನುಷ್ಠಾನಪರಂ ಶಿಲ್ಪರಚನಾರಹಸ್ಯಾರ್ಥ ತತ್ತ್ವವಿದಂ ಶಿಲ್ಪಿನಂ ಗಂಧಮಾಲ್ಯನೂತನವಸ್ತ್ರಾದಿಭಿಃ ಸಂಪೂಜ್ಯ,

ವಿಶ್ವಕರ್ಮಾ ಯಥಾ ಪೂರ್ವೇ ದೇವಾನಾಂ ನಾಮಧಾಃ ಪ್ರಭುಃ ।
ರೂಪಧಾಶ್ಚ ಜಗತ್ಸ್ರಷ್ಟಾ ಶಿಲ್ಪೀ ಕರ್ಮಾ ಪ್ರಜಾಪತಿಃ ॥
ಸರ್ವಲೋಕಹಿತ ಶ್ಚೈವಮಾ ನಭವ ಲ್ಲೋಕಕಾರಣಃ ।
ತ್ವಂ ತಥಾ ಕೃಪಯಾವಿಷ್ಟ ಸ್ಸುಪ್ರಸನ್ನಃ ಪ್ರಭೋ ಮಮ ॥

ದುಷ್ಟಗಂಡಾಂತದೋಷಾಹಾಂ ಪ್ರಶಾಂತಾಂ ಸುಖದಾಯಿನೀಂ |
ಸಂತಾನದಾಂ ಚ ಶಾಸ್ತ್ರೋಕ್ತಾಂ ಸರ್ವಲಕ್ಷಣಸಂಯುತಾಂ ||
ಪ್ರತಿಮಾಂ—ದೇವ—ದೇವಸ್ಯ ಕೃತ್ವಾ ವೇದಾಭಿಮಂತ್ರಿತಾಂ |
ಅನುಗೃಹ್ಣಾತು ಭಗವರ್ನ ಶಿಲ್ಪಿರ್ನ ಸರ್ವನಮಸ್ಕೃತ ||

ಇತಿ ಸಂಪ್ರಾರ್ಥ್ಯ, ಕುಟುಂಬಸಮೇತಸ್ಯ ಮಮಾನುಗ್ರಹಾರ್ಥಂ ಜನ್ಮ ಜನ್ಮಾಂತರಕೃತ ಪಾಪದೋಷಜನಿತ ಸಕಲಗಂಡದುರ್ದೋಷನಿವೃತ್ತ್ಯರ್ಥಂ ಮಯಾ ಕರಿಷ್ಯಮಾಣ ದೇವಪ್ರತಿಷ್ಠಾರ್ಥಂ ಪ್ರಧಾನದೇವತಾಪ್ರತಿಮಾಂ (ಪರಿವಾರದೇವತಾ ಪ್ರತಿಮಾಶ್ಚ) ಶಾಸ್ತ್ರೋಕ್ತರೀತ್ಯಾ ನಿರ್ಮಾಯ ದಾತವ್ಯಂ ಇತಿ ಫಲ ಪುಷ್ಪ ತಾಂಬೂಲ ಸಹಿತಂ (ಸಹಸ್ರಂ ದ್ವ್ಯಾದಿ ಶತಸಹಸ್ರಂ ವಾ ನಿಷ್ಕಂ) ದ್ರವ್ಯಂ ಸಮರ್ಪ್ಯ, ಯಥಾಚಾರಂ ಪ್ರಣಮೇತ್ | ಅಥ ಶಿಲ್ಪೀ ಯಜಮಾನಂ ಶಿಷ್ಯಾದಿನಾ ಗಂಧಮಾಲ್ಯಾದಿಭಿಃ ಪುರಸ್ಕೃತ್ಯ, ತಥಾ ಕರೋಮೀತ್ಯುಕ್ತ್ವಾ, ತ್ವಯಾ ಕ್ರಿಯಮಾಣೇನ ದೇವತಾಪ್ರತಿಷ್ಠಾಪನೇನ ಯುಷ್ಮದರಿಷ್ಟಪರಿಹಾರದ್ವಾರಾ ಸತ್ಸಂತಾನ ಸೌಭಾಗ್ಯ ಶುಭಫಲಾವಾಪ್ತಿಃ ರಾಷ್ಟ್ರಸ್ಯಾಸ್ಯ ಸೌಖ್ಯಾಭಿವೃದ್ಧಿರಸ್ತ್ವಿತಿ ವೇದೋಕ್ತಾಶೀರ್ವಚನಂ ಪಠೇತ್ ||

ಕಾ. ವಿ. ಸಂಕಲ್ಪಾನಂತರ ಯಜಮಾನನು ನೂತನವಸ್ತ್ರಗಂಧಪುಷ್ಪಮಾಲಾ ಫಲತಾಂಬೂಲಾದಿಗಳು ಮತ್ತು ಪೂರ್ಣಕುಂಭ ಮೊದಲಾದ ಮಂಗಳವಸ್ತುಸಮೇತನಾಗಿ ಮುತ್ತೈದೆಯರಿಂದಲೂ ವೇದಪಾಠಕರಿಂದಲೂ ಪರಿವೃತನಾಗಿ ದೇವತಾಬಿಂಬ ನಿರ್ಮಾಣಮಾಡುವ ಶಿಲ್ಪಿಯ ಭವನಕ್ಕೆ ಹೋಗಿ, ಅಲ್ಲಿ ವೃದ್ಧನೂ ಸಕುಟುಂಬನೂ ವೇದವೇದಾಂಗ ಶಿಲ್ಪ ಜ್ಯೌತಿಷಾದಿ ಸಕಲವಿದ್ಯಾಸಂಪನ್ನನೂ ಆದ ಶಿಲ್ಪಿಯನ್ನು ಗಂಧಮಾಲ್ಯ ವಸ್ತ್ರಾದಿಗಳಿಂದ ಶಿಷ್ಟಾಚಾರದಂತೆ ಪೂಜೆಮಾಡಿ ಪ್ರಾರ್ಥಿಸಿ, ನನ್ನ ಜನ್ಮಾಂತರ ಪಾಪದೋಷದಿಂದ ಹುಟ್ಟಿದ ಪುತ್ರ ಪತ್ನಿ ದಾಸ ದಾಸೀ ಧನ ಧಾನ್ಯಾದಿಗಳ ವಿನಾಶರೂಪಗಂಡದಿಂದ ನನಗೆ ನಿವೃತ್ತಿಯನ್ನುಂಟುಮಾಡಿಪುಣ್ಯಜ್ಞಾನಗಳುಂಟಾಗಲು ಯೋಗ್ಯವಾದ ಶಾಸ್ತ್ರೋಕ್ತವಾದ ಪ್ರಧಾನದೇವತಾ ಪರಿವಾರ ದೇವತಾ ಬಿಂಬಗಳನ್ನು (ತನ್ನ ಶಕ್ತಿಗನುಣವಾದ ದೇವಾಲಯ ಗೋಪುರ ಪ್ರಾಕಾರಗಳನ್ನು) ದೈವಶಿಲ್ಪಶಾಸ್ತ್ರೋಕ್ತರೀತಿಯಾಗಿ ನಿರ್ಮಾಣಮಾಡಿ ಕೊಡಬೇಕೆಂದು ಬೇಡಿಕೊಂಡು ಯಥಾಶಕ್ತಿ (ಸಹಸ್ರ ಅಥವಾ ಆವಶ್ಯಕವಾದ) ದ್ರವ್ಯವನ್ನು ಸಮರ್ಪಣಮಾಡಿ, ನಮಸ್ಕರಿಸಬೇಕು. ಆಗ ಶಿಲ್ಪಿಯು ಈರೀತಿ ಪ್ರಾರ್ಥಿಸುವ ಯಜಮಾನನಿಗೆ ತನ್ನ ಶಿಷ್ಯರ ಮೂಲಕ ಗಂಧಮಾಲ್ಯಾದಿಗಳಿಂದ ಬಹುಮಾನಿಸಿ, ಗೌರವಿಸಿ ನೀನು ಮಾಡುವ ದೇವತಾಬಿಂಬಪ್ರತಿಷ್ಠಾಪನೆಯಿಂದ ನಿನಗೂ, ನಿನ್ನ ವಂಶಕ್ಕೂ ರಾಷ್ಟ್ರಕ್ಕೂ ರಾಷ್ಟ್ರಾಧಿಪತಿಗೂ ಸಮಸ್ತಸನ್ಮಂಗಳಗಳುಂಟಾಗಲಿ ಎಂದು ಆಶೀರ್ವದಿಸಬೇಕು.

## ಶಿಲಾ ಸಂಗ್ರಹಣಂ

ತತಃ ಶಿಲ್ಪೀ ಯಜಮಾನ ಶುಭಾನುಕೂಲೇ ಮಂಗಳದಿನೇ ಶಿಷ್ಯಾದಿಭಿಸ್ಸಮೇತೋ ಗಂಧಪುಷ್ಪ ಧೂಪದೀಪ ಘಂಟಾದ್ಯುಪಕರಣ ಪಂಚಗವ್ಯ ಹರಿದ್ರಾಕುಂಕುಮಾದಿಭಿಃ ಮಂಗಳಸಂಭಾರೈಃ ಸಹ ಪವಿತ್ರದೇಶಂ ಗತ್ವಾ, ತತ್ರ ಭೂಮಿಂ

ಆಪೋವಾ ಇದ ಮಗ್ರೇ ಸಲಿಲಮಾಸೀ ತ್ತಸ್ಮಿನ್ ಪ್ರಜಾಪತಿರ್ವಾಯು
ರ್ಭೂತ್ವಾ ಚರತ್ಸ ಇಮಾ ಮಪಶ್ಯತ್ತಾಂ ವರಾಹೋ ಭೂತ್ವಾ ಹರತ್ತಾಂ
ವಿಶ್ವಕರ್ಮಾ ಭೂತ್ವಾ ವ್ಯಮಾರ್ಟ್ ತ್ಸಾ ಪ್ರಥತ ಸಾ ಪೃಥಿವ್ಯಭವ
ತ್ತತ್ಪೃಥಿವ್ಯೈ ಪೃಥಿವಿತ್ವಂ॥ ಯಸ್ಯಾಂ ವೇದಿಂ ಪರಿಗೃಹ್ಣಂತಿ ಭೂಮ್ಯಾಂ
ಯಸ್ಯಾಂ ಯಜ್ಞಂತನ್ವತೇ ವಿಶ್ವಕರ್ಮಾಣಃ। ಯಸ್ಯಾಂ ಮಿಮಾಯಂತೇ
ಸ್ಸ್ವರವಃ ಪೃಥಿವ್ಯಾ ಮೂರ್ಧ್ವಾ ಶ್ಶುಕ್ರಾ ಆಹುತ್ಯಾಃ ಪುರಸ್ತಾತ್।
ಸಾನೋ ಭೂಮಿ ರ್ವರ್ಧಯ ದ್ವರ್ಧಮಾನಾ॥

ಇತಿ ಸಂಪ್ರಾರ್ಥ್ಯ, ತಂ ಪ್ರದೇಶಂ ಪಂಚಗವ್ಯೈಃ ಶುದ್ಧಾಭಿರದ್ಭಿಃ ಸಂಪ್ರೋಕ್ಷ್ಯ, ಭೂದೇವತಾಂ ಷೋಡಶೋಪಚಾರೈಃ ಸಂಪೂಜ್ಯ, ಮಹಾಗಣಾಧಿಪತಿಪೂಜಾಂ ಪುಣ್ಯಾಹವಾಚನಂ ಚ ಕೃತ್ವಾ, ಭೂಮಿರ್ಭೂಮ್ನಾ ಇತಿ ಭೂಮಿಮಭಿಮಂತ್ರ್ಯ, ಮಾವೋರಿಷತ್ಖನಿತಾ ಇತಿ ಭೂಮಿಂ ಖನಿತ್ವಾ, ದೇವತಾನಿರ್ಮಾಣಯೋಗ್ಯಾಂ ಶಿಲ್ಪಶಾಸ್ತ್ರೋಕ್ತ ಲಕ್ಷಣಯುಕ್ತಾಂ ಭಿನ್ನತ್ವಗರ್ತತ್ವಾದಿ ಸರ್ವದೋಷರಹಿತಾಂ ಶಿಲಾಂ ಸಂಪಾದ್ಯ,

ಶಿಲಾ ಭೂಮಿ ರಶ್ಮಾಪಾಂಸುಃ ಸಾ ಭೂಮಿ ಸ್ಸಂಧೃತಾ ಧೃತಾ। ತಸ್ಯೈ
ಹಿರಣ್ಯವಕ್ಷಸೇ ಪೃಥಿವ್ಯಾ ಅಕರಂ ನಮಃ॥

ಇತಿ ಸಂಪ್ರಾರ್ಥ್ಯ, ಗಾಯತ್ರ್ಯಾಭಿಮಂತ್ರ್ಯ, ತಾಂ ಗೋಮಯೇನ ಪ್ರಕ್ಷಾಳ್ಯ, ಗಂಧಾದಿಭಿರ್ಭೂಷಯಿತ್ವಾ, ರಥೇ ಯಾನೇ ವಾರೋಪ್ಯ, ಶಾಕುನಂ ಸೂಕ್ತಂ ಪಠನ್ ಶಿಲ್ಪಶಾಲಾಂ ಪ್ರವಿಶ್ಯ, ತತ್ರ ಸಂಸ್ಥಾಪ್ಯ, ತಾಂ ಶಿಲಾಂ ವಿಭಾಗಯಂತ್ರಕುದ್ದಾಲಕರ್ತರೀಶಲಾಕಾದೀನಿ ಶಸ್ತ್ರಾಣಿ ಚ ಹರಿದ್ರಾಕುಂಕುಮಪುಷ್ಪಾಕ್ಷತೈಃ ಸಂಪೂಜಯೇತ್॥

ಕಾ.ವಿ. ಆಗ ಶಿಲ್ಪಿಯು ಯಜಮಾನನ ಜಾತಕರೀತ್ಯಾ, ಶುಭಾನುಕೂಲವಾದ ಪ್ರಶಸ್ತ ದಿನ ಮುಹೂರ್ತಗಳನ್ನು ನಿರ್ಣಯಿಸಿ, ಶಿಷ್ಯಾದಿಗಳೊಡನೆ ಗಂಧ ಪುಷ್ಪಾದಿ ಸಕಲ ಮಂಗಳ ವಸ್ತುಗಳ ಸಮೇತ ದೇವತಾಬಿಂಬ ನಿರ್ಮಾಣಯೋಗ್ಯ ಶಿಲೆಯು ಹುಟ್ಟುವ ಭೂಪ್ರದೇಶಕ್ಕೆ ಹೋಗಿ ಅಲ್ಲಿ ಭೂಮಿಯನ್ನು ಆಪೋವಾ ಮಂತ್ರಗಳಿಂದ ಪ್ರಾರ್ಥಿಸಿ, ಆ ಸ್ಥಳವನ್ನು ಪಂಚಗವ್ಯಾದಿಗಳಿಂದ ಪ್ರೋಕ್ಷಿಸಿ, ಷೋಡಶೋಪಚಾರ ಪೂಜೆ ಮಾಡಿ, ಪುಣ್ಯಾಹವಾಚನಮಾಡಿ, ಭೂಮಿರ್ಭೂಮ್ನಾ ಮಂತ್ರಗಳಿಂದ ಭೂಮಿಯನ್ನಭಿಮಂತ್ರಿಸಿ, ಮಾಪೋರಿಷತ್ ಮಂತ್ರಗಳಿಂದ ಭೂಮಿಯನ್ನು ಅಗೆಸಿ, ಪ್ರಮಾಣಯುತವಾದ ಭಿನ್ನತ್ವ ಗರ್ತತ್ವಾದಿ ದೋಷಗಳಿಲ್ಲದ ಶಾಸ್ತ್ರೋಕ್ತ ಲಕ್ಷಣ ಗಳಿಂದ ಕೂಡಿದ ಶಿಲೆಯನ್ನು ಮೇಲಕ್ಕೆ ತೆಗೆದು, ಶಿಲಾಭೂಮಿಃ ಓಂತತ್ಸವಿತುಃ ಮಂತ್ರಗಳಿಂದ ಶಿಲೆಯನ್ನಭಿಮಂತ್ರಿಸಿ, ಗೋಮಯದಿಂದಲೂ ನೀರಿನಿಂದಲೂ ಚೆನ್ನಾಗಿ ತೊಳೆದು, ಗಂಧಾದಿಗಳಿಂದ ಅಲಂಕರಿಸಿ, ರಥ ಮುಂತಾದ ವಾಹನಗಳಲ್ಲಿ ಇರಿಸಿ, ಶಾಕುನಸೂಕ್ತಾದಿ ಮಂತ್ರಗಳನ್ನು ಪಠಿಸುತ್ತಾ ಶಿಲೆಯನ್ನು ಶಿಲ್ಪಶಾಲೆಗೆ ತೆಗೆದುಕೊಂಡು ಹೋಗಿ, ಅಲ್ಲಿ ಇರಿಸಿ, ಆ ಶಿಲೆಯನ್ನೂ ವಿಭಾಗ ಯಂತ್ರ ಕುದ್ದಾಲ ಕರ್ತರೀ ಶಲಾಕಾದಿ ಆಯುಧಗಳನ್ನೂ ಹರಿದ್ರಾಕುಂಕುಮ ಗಂಧ ಪುಷ್ಪಾದಿ ಗಳಿಂದ ಪೂಜೆ ಮಾಡಬೇಕು.

## ದೇವತಾ ನಿರ್ಮಾಣಂ

ತತಃ ಶುಭದಿನೇ ಸುಮುಹೂರ್ತೇ ಸುಸ್ನಾತೋ ಗಂಧಮಾಲ್ಯಾಂಬರಾದಿಭಿಃ ಭೂಷಿತೋ ದೇವತಾರೂಪಂ ಮನಸಿ ವಿಚಿಂತಯೇತ್,

ತ್ವಷ್ಟಾ ರೂಪಾಣಿ ಹಿ ಪ್ರಭುಃ ಪಶೂನ್ ವಿಶ್ವಾನ್ ತ್ಸಮಾನಜೇ। ತೇಷಾಂ ನಸ್ಸ್ಫಾತಿ ಮಾ ಯಜ॥

ಇತಿ ರೂಪಾಧಿಪತಿಂ ತ್ವಷ್ಟಾರಂ ಧ್ಯಾತ್ವಾ,

ಭಾರತೀಡೇ ಸರಸ್ವತಿ ಯಾವ ಸ್ಸರ್ವಾ ಉಪಕ್ರುವೇ। ತಾನ ಶ್ಚೋದಯತ ಶ್ರಿಯೇ ॥ ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ। ಯಜ್ಞಂ ದಧೇ ಸರಸ್ವತೀ॥ ಮಹೋ ಅರ್ಣ ಸ್ಸರಸ್ವತೀ ಪ್ರಚೇತಯತಿ ಕೇತುನಾ। ಧಿಯೋ ವಿಶ್ವಾ ವಿರಾಜತಿ॥ ಕರಾಗ್ರೇ ವಸತು ಬ್ರಾಹ್ಮಿ ಮಮ ದೇವಿ ಸರಸ್ವತಿ। ಬುದ್ಧೌ ಪ್ರವಿಶ್ಯ ಕಾರ್ಯೇಽಸ್ಮಿನ್ ದಿಶ ದೇವಿ ಪ್ರಸೀದತು॥

ಇತಿ ಸರಸ್ವತೀಂ ನತ್ವಾ,

ಕಾಸೀತ್ ಪ್ರಮಾ ಪ್ರತಿಮಾ ಕಂ ನಿದಾನ ಮಾಜ್ಯಂ ಕಿಮಾಸಿ ತ್ಪರಿಧಿಃ ಕ ಆಸೀತ್। ಛಂದಃ ಕಿಮಾಸೀ ತ್ಪ್ರ ಉಗಂ ಕಿಮುಕ್ಥಂ ಯ ದ್ದೇವಾ ದೇವ ಮಯಜಂತ ವಿಶ್ವೇ॥ ಆದಿತ್ಯಂ ಗರ್ಭಂ ಪಯಸಾ ಸಮಂಜ್ಜ ತ್ಸಹ ಸ್ರಸ್ಯ ಪ್ರತಿಮಾಂ ವಿಶ್ವರೂಪಂ। ಪರಿವೃಂಧಿ ಹರಸಾವಾಭಿಮ್ನೃಕ್ಷ ಶ್ಯತಾ ಯುಷಂ ಕೃಣುಹಿ ಚೀಯಮಾನಃ ॥

ಇತಿ ಶಿಲಾಯಾಂ ಶಿಲ್ಪಶಾಸ್ತ್ರೋಕ್ತದಶತಾಲಾದಿದೇವತಾಪ್ರಮಾಣಯುತಂ ದೇವ ರೂಪಂ ವಿಲಿಖ್ಯ, ಕುದ್ದಾಲಶಲಾಕೇತ್ಯಾದಿಭಿಃ ಸಮಗ್ರಂ ದೇವತಾರೂಪಂ ನಿರ್ಮಾಯ, ನಿರ್ಮಾಣಕಾಲೇ ಆದೌ ಮಧ್ಯೇ ಅಂತೇ ಚ ತಿಸ್ರಃ ಪೂಜಾಃ ಕೃತ್ವಾ, ನಿರ್ಮಾಣಾಂತೇ

ಅಪಾಂ ಯೋ ಅಗ್ನೇ ಪ್ರತಿಮಾ ಬಭೂವಃ ಪ್ರಭೂ ಸ್ಸರ್ವಸ್ಮೈ ಪೃಥಿವೀವ ದೇವೀ। ಪಿತಾ ವತ್ಸಾನಾಂ ಪತಿ ರಘ್ನಿಯಾನಾಗ್ಂ ಸಾಹಮ್ರೇ ಪಾಷೇ ಅಪಿನಃ ಕೃಣೋತು ॥

ಇತಿ ಪ್ರತಿಮಾಂ ಅಭಿಮಂತ್ರ್ಯ, ಯಜಮಾನಮಾಹೂಯ, ಮಹಾಗಣಾಧಿಪತಿ ಪೂಜಾಂ ಪುಣ್ಯಾಹವಾಚನಂ ಚ ಕೃತ್ವಾ, ವ್ರೀಹೀ್ ಪ್ರಸಾರ್ಯ, ಪಂಚ ಕಲಶಾ ನಿಕ್ಷಿಪ್ಯ, ಸಕಲ ಜಗದಧಿಪತಿಂ ಲೋಕಕಾರಣಂ ಸರ್ವದೇವತಾರೂಪಿಣಂ ಭಗ ವಂತಂ ವಿಶ್ವಕರ್ಮಾಣಂ ತೇಷ್ವಾವಾಹ್ಯ, ವಿಶ್ವಕರ್ಮಸೂಕ್ತೇನ ಷೋಡಶೋಪ ಚಾರೈಃ ಸಂಪೂಜ್ಯ, ಪ್ರತಿಮಾಯಾಃ ಅಷ್ಟದಿಕ್ಷು ಅಷ್ಟಾ ಕಲಶಾ ಸಂಸ್ಥಾಪ್ಯ, ತೇಷು ಯಥಾಕ್ರಮಂ ಸಕಲೌಷಧಾನಿ ಸರ್ವಧಾನ್ಯಾನಿ ಪಂಚಗವ್ಯ ಪಂಚತ್ವಕ್ ಪಂಚಪಲ್ಲವ ನವರತ್ನಾನಿ ನವಲೋಹಾನಿ ಗಂಗಾನದ್ಯಾದಿಮಹಾತೀರ್ಥಾನಿ ಚ ನಿಕ್ಷಿಪ್ಯ, ಅದ್ಭಿರಾಪೂರ್ಯ, ಷೋಡಶೋಪಚಾರೈಃ ಸಂಪೂಜ್ಯ, ವಿಶ್ವಕರ್ಮಸೂಕ್ತ ಪಾರಾಯಣ ಪೂರ್ವಕಂ ಕಲಶೋದಕೈಃ ಪ್ರತಿಮಾಯಾ ಅಭಿಷೇಕಂ ವಿಧಾಯ, ಪ್ರತಿಮಾಂ ಸಂಪೂಜ್ಯ, ತಸ್ಯಾಃ ಅಷ್ಟದಿಕ್ಷು ಅಷ್ಟವಿಧಾನ್ನೈ ರ್ಬಲಿಂ ದದ್ಯಾತ್ ॥

ಕಾ.ವಿ. ಒಂದು ಒಳ್ಳೆಯ ಶುಭದಿನದಲ್ಲಿ ಶಿಲ್ಪಿಯು ಸುಸ್ನಾತನಾಗಿ ದಿವ್ಯಾಂಬರ ಭೂಷಿತನಾಗಿ ಸಂಧ್ಯಾದಿ ನಿತ್ಯಕರ್ಮಾ ನಂತರ ತನ್ನ ಆಸನದಲ್ಲಿ ಕುಳಿತು ದೇವತಾ ರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಿ, ರೂಪಾಧಿಪತಿಯಾದ ತ್ವಷ್ಟೃ ಬ್ರಹ್ಮನನ್ನೂ,

ವಾಗ್ದೇವಿಯನ್ನೂ ಸ್ತೋತ್ರಮಾಡಿ, ಕಾಸೀತ್ಪ್ರಮಾ ಮಂತ್ರಗಳಿಂದ ಶಿಲೆಯ ಮೇಲೆ ಪ್ರಮಾಣತಾಲಮಾನಗಳಿಂದ ಯುಕ್ತವಾದ ದೇವತಾಬಿಂಬ ರೂಪವನ್ನು ಬರೆದು, ಆಯುಧಗಳಿಂದ ದೇವರೂಪವನ್ನು ಬಿಡಿಸಿ, ಆ ನಿರ್ಮಾಣ ಕಾಲದಲ್ಲಿ ಮೊದಲು, ಮತ್ತು ದೇವರೂಪ ಕಂಡುಬರುವಾಗ, ಮತ್ತೆ ಪೂರ್ತಿ ದೇವತಾಬಿಂಬ ನಿರ್ಮಾಣವಾದಾಗ ಹೀಗೆ ಮೂರಾವೃತ್ತಿ ಪೂಜೆಗಳನ್ನು ಮಾಡಿ, ಕೊನೆಯಲ್ಲಿ ಅಪಾಂಯೋ ಮಂತ್ರಗಳಿಂದ ಪ್ರತಿಮೆಯನ್ನಭಿಮಂತ್ರಿಸಿ, ಯಜಮಾನನನ್ನು ಕರೆಸಿ, ಗಣಪತಿಪೂಜೆ ಪುಣ್ಯಾಹವಾಚನಗಳನ್ನು ಮಾಡಿ, ಮುಂಭಾಗದಲ್ಲಿ ಭತ್ತವನ್ನು ಹರಡಿ, ಐದು ಕಲಶಗಳನ್ನು ಇಟ್ಟು, ಸಕಲಲೋಕಕಾರಣನಾದ ಶ್ರೀ ವಿಶ್ವಕರ್ಮನನ್ನು ಆವಾಹಿಸಿ, ವಿಶ್ವಕರ್ಮ ಸೂಕ್ತದಿಂದ ಷೋಡಶೋಪಚಾರಪೂಜೆ ಮಾಡಿ, ದೇವತಾಬಿಂಬದ ಸಮೀಪದಲ್ಲಿ ಎಂಟು ದಿಕ್ಕುಗಳಲ್ಲಿಯೂ ಎಂಟು ಕಲಶಗಳನ್ನಿರಿಸಿ, ಕ್ರಮವಾಗಿ, ಎಲ್ಲ ಔಷಧ ವಸ್ತುಗಳು, ಎಲ್ಲ ಧಾನ್ಯಗಳು, ಪಂಚಗವ್ಯ, ಪಂಚತ್ವಕ್, ಪಂಚಪಲ್ಲವ, ನವರತ್ನ, ನವಲೋಹ, ಸಿಂಧು ಗಂಗಾ ಕಾವೇರ್ಯಾದಿ ಮಹಾ ನದೀತೀರ್ಥ ಹೀಗೆ ಎಂಟು ಕಲಶಗಳಲ್ಲಿಯೂ ಇಟ್ಟು, ನೀರಿನಿಂದ ತುಂಬಿ, ಷೋಡಶೋಪಚಾರಗಳಿಂದ ಪೂಜಿಸಿ, ವಿಶ್ವಕರ್ಮಸೂಕ್ತ ಪಾರಾಯಣಪೂರ್ವಕ ಕಲಶೋದಕಗಳಿಂದ ದೇವಬಿಂಬಕ್ಕೆ ಅಭಿಷೇಕ ಮಾಡಿ, ಬಿಂಬದ ಎಂಟು ದಿಕ್ಕುಗಳಲ್ಲಿ ಚಿತ್ರಾನ್ನಗಳಿಂದ ಬಲಿ ಇಟ್ಟು, ಬಿಂಬಕ್ಕೆ ಷೋಡಶೋಪಚಾರ ಪೂಜೆ ಮಾಡಬೇಕು.

## ಚರಮೂರ್ತಿ ನಿರ್ಮಾಣಂ

ಯಜಮಾನೇನ ಪ್ರಾರ್ಥಿತಃ ಶೈಲ್ಪೀ ಚರದೇವತಾಮೂರ್ತಿನಿರ್ಮಾಣಂ ಕರ್ತುಂ ಆದೌ ತ್ವಷ್ಟಾರಂ ಸರಸ್ವತೀಂ ಧ್ಯಾತ್ವಾ. ಮಧುಪಿಷ್ಟಂ ಗೃಹೀತ್ವಾ, ಸಂಶೋಧ್ಯ, ಸಂಸ್ಕೃತ್ಯ, ತೇನ ಶಾಸ್ತ್ರೋಕ್ತಾಲಂಕಾರಾಭರಣಾಯುಧಾದ್ಯುಪೇತಂ ದೇವತಾಪ್ರಮಾಣವಿಧಿಮಾನಯುಕ್ತಂ ದೇವರೂಪಂ ವಿಧಾಯ, ಶುದ್ಧಾಭಿ ಸ್ಸಂಸ್ಕೃತಾಭಿ ರ್ಮೃತ್ತಿಕಾಭಿ ರಾಚ್ಛಾದ್ಯ. ಸೂರ್ಯರಶ್ಮಿಷು ಸಂತಾಪ್ಯ, ಶುಭದಿನೇ ಸುಮುಹೂರ್ತೇ ಅಗ್ನಿಷ್ಠಾಯಾಂ ಅಗ್ನಿಂ ಮಂತ್ರವತ್ಪ್ರತಿಷ್ಠಾಪ್ಯ, ಅಕ್ಷತೈರಲಂಕೃತ್ಯ, ಸ್ಸಂಪೂಜ್ಯ,

ಅಗ್ನಿ ಸ್ಸಪ್ತಿಂ ವಾಜಂ ಭರಂ ದದಾತ್ಯಗ್ನಿ ರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ।
ಅಗ್ನೇರೋದಸೀ ವಿಚರ ತ್ಸಮಂಜ ನ್ನಗ್ನಿ ರ್ನಾರೀಂ ವೀರಕುಕ್ಷಿಂ ಪುರಂಧಿಂ॥

ಇತ್ಯಗ್ನಿ ಮಭಿಮಂತ್ರ್ಯ, ಅಗ್ನೌ ಮೃದಾಚ್ಛಾದಿತಮಧುಪಿಷ್ಟದೇವತಾ ಪ್ರತಿಮಾಂ ನಿಕ್ಷಿಪ್ಯ, ಮಧುಪಿಷ್ಟಂ ವಿಲಾಪ್ಯ, ಅಗ್ನೌ ತಾಪಯಿತ್ವಾ, ತತಃ

ಸುವರ್ಣತಾಮ್ರ ರಜತಾದ್ಯೇಕಂ ಲೋಕಂ ದ್ವೇ ಲೋಹೇ ತ್ರೀಣಿ ಲೋಹಾನಿ ಚತು ರ್ಲೋಹಾನಿ ಪಂಚಲೋಹಾನಿ ವಾ ಯಥೋಕ್ತವತ್ಸಂಪಾದ್ಯ, ಮೃತ್ಸಾಧನಾದಿಷು ಲೋಹಾನ್ಯಗ್ನೌ ದ್ರವರೂಪವತ್ತಾಪಯಿತ್ವಾ, ಪ್ರಾಪ್ತೇ ಸುಮುಹೂರ್ತೇ ಪಂಚ ಸೂಕ್ತ ಪಾರಾಯಣ ವೇದ ಪಾರಾಯಣ ಘಂಟಾತಾತಾನಡಮರುಗಶಂಖತೂರ್ಯ ಮಂಗಳವಾದ್ಯಘೋಷಪುರಸ್ಸರಂ

ಸಾಧ್ವರ್ಯಾ ಅತಿಥಿ ನೀರಿಷಿರಾ ಸ್ಪಾರ್ಹಾ ಸುವರ್ಣಾ ಅನವದ್ಯರೂಪಾಃ।

ಬೃಹಸ್ಪತಿಃ ಪರ್ವತೇಭ್ಯೋ ವಿತೂರ್ಯಾನಿರ್ಗಾ ಊಪೇಯವ ಮಿವಸ್ಥಿ

ವಿಭ್ಯಃ ॥ ವೈಶ್ವಾನರಸ್ಯ ಪ್ರತಿನೋಪರಿ ದ್ಯೌ ಯರ್ಾವದ್ರೋದಸೀ ವಿಬ

ಬಾಧೇ ಅಗ್ನಿಃ। ತತಃ ಷಷ್ಠಾ ದಾಮುತೋ ಯಂತಿ ಸ್ತೋಮಾ ಉದಿತೋ

ಯಾತ್ಯಭಿ ಷಷ್ಮ ಮಹ್ನಃ ॥

ಇತಿ ಮೃತ್ಪಿಂಡಂ ದೇವಗರ್ಭಂ ದ್ರವರೂಪೈ ರ್ಲೋಹೈ ರಾಪೂರ್ಯ,

ಯದ್ಧಿರಣ್ಯಂ ಸೂರ್ಯೇಣ ಸುವರ್ಣಂ ಪ್ರಜಾವಂತೋ ಮನವಃ ಪೂರ್ವ

ಈಷಿರೇ। ತತ್ತ್ವಚಂದ್ರಂ ವರ್ಚಸಾ ಸಂಸೃಜಾ ತ್ಯಾಯುಷ್ಮಾ ಭವತಿ

ಯೋ ಬಿಭರ್ತಿ ॥

ಇತಿ ತಮಭಿಮಂತ್ರ್ಯ, ಅದ್ಭಿ ಸ್ಸಂಸ್ನಾಪ್ಯ, ಆದ್ರ್ರಂ ಕೃತ್ವಾ, ಪರಿಗತಂ ಮೃದ್ಭಾಗಂ ಸಂಭೇದ್ಯ,

ಅಪಾಂಯೋ ಅಗ್ನೇ........ಆಪಿನಃ ಕೃಣೋತು ॥ (ಪುಟ ೬)

ಇತಿ ಪ್ರತಿಮಾಂ ಅಭಿಮಂತ್ರ್ಯ, ಕುಂಕುಮಾಂಬುಭಿಃ ನೀರಾಜನಂ ಕಾರ ಯಿತ್ವಾ, ಅಷ್ಟದಿಕ್ಷು ಬಲಿಂ ಕ್ಷಿಪೇತ್। ತತೋ ದೇವತಾಪ್ರತಿಮಾಂ ಸಂಶೋಧ್ಯ, ಕುದ್ದಾಲಶಲಾಕಾದಿಭಿಃ ಜೀವರೇಖಾಂಶ್ಚ ಕೃತ್ವಾ, ತೇಜೋರೂಪಂ ನಿರ್ಮಾಯ, ನಿರ್ಮಾಣಾಂತೇ ಯಜಮಾನಮಾಹೂಯ, ಪೂರ್ವವತ್ಪಂಚಕಲಶಾ ನಿಕ್ಷಿಪ್ಯ, ವಿಶ್ವಕರ್ಮಾಣಂ ಸಂಪೂಜ್ಯ, ಅಷ್ಟದಿಕ್ಷು ಅಷ್ಟೌ ಕಲಶಾ ಸಂಸ್ಥಾಪ್ಯ, ತೇಷು ಪೂರ್ವವದ್ವಸ್ತೂನಿ ನಿಕ್ಷಿಪ್ಯ, ಅಭಿಷೇಕಂ ವಿಧಾಯ, ಅಷ್ಟದಿಕ್ಷು ಅಷ್ಟವಿಧಾನ್ನೈ ರ್ಬಲಿಂ ದದ್ಯಾತ್ ॥

ಯಜಮಾನನಿಂದ ಪ್ರಾರ್ಥಿಸಲ್ಪಟ್ಟ ಶಿಲ್ಪಿಯು ಉತ್ಸವ ದೇವತಾಮೂರ್ತಿ ನಿರ್ಮಾಣ ಮಾಡಲುಪಕ್ರಮಿಸಿ ಮೊದಲು ತ್ವಷ್ಟ್ರು ಬ್ರಹ್ಮನನ್ನೂ ಸರಸ್ವತಿಯನ್ನೂ ಧ್ಯಾನಮಾಡಿ, ಜೇನು

ಮೇಣವನ್ನು ತೆಗೆದುಕೊಂಡು ಪರಿಶೋಧಿಸಿ. ವಿಧ್ಯುಕ್ತವಾಗಿ ಸಂಸ್ಕಾರಮಾಡಿ, ಆದರಿಂದ ದೇವತಾಮೂರ್ತಿಯನ್ನು ಶಿಲ್ಪಶಾಸ್ತ್ರೋಕ್ತ ಅಲಂಕಾರ ಆಭರಣಾದಿಗಳಿಂದ ಯುಕ್ತವಾಗಿರುವಂತೆಯೂ ತಾಲಮಾನ ಪ್ರಮಾಣಯುತವಾಗಿರುವಂತೆಯೂ, ನಿರ್ಮಾಣಮಾಡಿ, ಶುದ್ಧವಾಗಿ ಅದಕ್ಕಾಗಿಯೇ ಪರಿಶೋಧಿಸಿ ಸಂಸ್ಕರಿಸಲ್ಪಟ್ಟ ಮೃತ್ತಿಕೆಯನ್ನು ಅದಕ್ಕೆ ಆಚ್ಛಾದನೆ ಮಾಡಿ, ಸೂರ್ಯನ ಬಿಸಿಲಿನಲ್ಲಿ ಒಣಗಿಸಿ, ಒಳ್ಳೆಯ ದಿನ ಮುಹೂರ್ತದಲ್ಲಿ ಅಗ್ನಿಷ್ಠೆಯಲ್ಲಿ ಅಗ್ನಿಯನ್ನು ಮಂತ್ರ ಪೂರ್ವಕವಾಗಿ ಪ್ರತಿಷ್ಠಾಪಿಸಿ, ಅಕ್ಷತಾದಿಗಳಿಂದ ಅಲಂಕರಿಸಿ, ಅಗ್ನಿಸ್ಸಪ್ತಿ ಮಂತ್ರದಿಂದ ಅಭಿಮಂತ್ರಿಸಿ, ಅಗ್ನಿಯಲ್ಲಿ ಮೃತ್ತಿಕೆಯಿಂದಾಚ್ಛಾದಿತವಾಗಿರುವ ದೇವತಾಮೂರ್ತಿಯನ್ನು ಇಟ್ಟು ಕಾಯಿಸಿ, ಜೇನುಮೇಣವನ್ನು ಸುರಿದು, ಅಗ್ನಿಯಲ್ಲಿ ಚಿನ್ನ, ತಾಮ್ರ, ಬೆಳ್ಳಿ ಮುಂತಾದ ಒಂದು, ಎರಡು, ಮೂರು, ಅಥವಾ ಐದು ಇತ್ಯಾದಿ ಶಾಸ್ತ್ರೋಕ್ತಿಯಂತೆ ಲೋಹಗಳನ್ನು ಯಥಾ ಪ್ರಮಾಣದಲ್ಲಿ ಕರಗಿಸಿ, ಸುಮುಹೂರ್ತ ಕಾಲದಲ್ಲಿ ವೇದ ಪಾರಾಯಣ ಪಂಚಸೂಕ್ತ ಪಾರಾಯಣಗಳನ್ನು ಶಿಲ್ಪಿ ಸಮೂಹವು ಘೋಷಿಸುತ್ತಿರುವಾಗ, ಘಂಟಾ, ಡಮರುಗ, ಶಂಖ, ಭೇರಿ, ಕಹಳೆ ಜಾಗಟೆ ಇತ್ಯಾದಿ ವಾದ್ಯಘೋಷಗಳು ನಡೆಯಲು ಸಾಧ್ವರ್ಯಾ ಮಂತ್ರದಿಂದ ಮೃತ್ಪಿಂಡರೂಪವಾದ ದೇವತಾಮೂರ್ತಿಯಲ್ಲಿ ದ್ರವರೂಪವಾದ ಲೋಹವನ್ನು ಆಯುಧಾದಿ ಸಾಧನಗಳಿಂದ ಸುರಿದು, ಯದ್ಧಿರಣ್ಯಂ ಮಂತ್ರದಿಂದ ಅದನ್ನಭಿಮಂತ್ರಿಸಿ, ಕಲಕಾಲ ಕಳೆದ ನಂತರ ನೀರಿನಿಂದ ಅಭಿಷೇಕ ಮಾಡಿ, ತಣ್ಣಗೆ ಮಾಡಿ, ಹೊರಭಾಗದ ಮೃತ್ತಿಕೆಯನ್ನು ತೆಗೆದು, ದೇವಮೂರ್ತಿಯನ್ನು ಅಪಾಂಯೋ ಅಗ್ನೇ ಮಂತ್ರದಿಂದ ಅಭಿಮಂತ್ರಿಸಿ, ಕುಂಕುಮ ನೀರಿನಿಂದ ನೀರಾಜನ ಮಾಡಿ, ಎಂಟು ದಿಕ್ಕುಗಳಲ್ಲಿ ಚಿತ್ರಾನ್ನಗಳಿಂದ ಬಲಿಯನ್ನಿಡಬೇಕು. ಅನಂತರ ದೇವಮೂರ್ತಿಯನ್ನು ಸಂಶೋಧಿಸಿ, ಕುದ್ದಾಲ ಶಲಾಕಾದ್ಯಾಯುಧಗಳಿಂದ ಜೀವರೇಖೆಗಳನ್ನಿಟ್ಟು ದೇವಕಲಾ ಸಂಪದ್ಯುಕ್ತವಾಗಿರುವಂತೆ ಬಿಂಬ ನಿರ್ಮಾಣ ಮಾಡಿ ಅನಂತರ ಯಜಮಾನನನ್ನು ಕರೆಸಿ, ಶಿಲಾಮೂರ್ತಿ ನಿರ್ಮಾಣದಂತೆಯೇ ಪಂಚ ಕಲಶಗಳನ್ನಿಟ್ಟು, ವಿಶ್ವಕರ್ಮ ಪರಮೇಶ್ವರನನ್ನಾವಾಹಿಸಿ ಪೂಜೆ ಮಾಡಿ, ಎಂಟು ದಿಕ್ಕುಗಳಲ್ಲಿ ಎಂಟು ಕಲಶಗಳನ್ನು ಸ್ಥಾಪಿಸಿ, ಅವುಗಳಲ್ಲಿ ಪೂರ್ವದಂತೆ ವಸ್ತುಗಳನ್ನಿಟ್ಟು ಪೂಜೆ ಮಾಡಿ, ಆ ನೀರಿನಿಂದ ಅಭಿಷೇಕ ಮಾಡಿ, ಎಂಟು ದಿಕ್ಕುಗಳಲ್ಲಿಯೂ ಎಂಟು ವಿಧಾನ್ನಗಳಿಂದ ಬಲಿಯನಿಡ್ಡಬೇಕು.

ಅಥ ಶಿಲ್ಪೀ ಶಿಲಾಯಾಃ ಲೋಹಸ್ಯ ವಾ ಪ್ರತಿಮಾಯಾಃ ಪ್ರಭಾವಲೀ ವಾಹನ ಭಕ್ತದೇವತಾಸ್ತಂಭ ಬಲಿಸ್ತಂಭ ಧ್ವಜಸ್ತಂಭ ಪೀಠಾದೀನಿ ಶಿಲಾಯಾಂ ಲೋಹೇಷುವಾ ಕೃತ್ವಾ, ತೇಷಾಂ ಪೂಜಾಃ ಕೃತ್ವಾ ಪುರತಃ ಬಲಿಂ ದದ್ಯಾತ್ ||

ಅನಂತರ ಶಿಲ್ಪಿಯು ಶಿಲಾದೇವರ ಅಥವಾ ಉತ್ಸವ ದೇವರ ಪ್ರತಿಮೆಗಳಿಗೆ ಪ್ರಭಾವಲೀ ವಾಹನ ಭಕ್ತದೇವತಾಸ್ತಂಭ ಬಲಿಸ್ತಂಭ ಧ್ವಜಸ್ತಂಭ ಪೀಠಾದಿಗಳನ್ನು ಶಿಲೆಯಲ್ಲಾಗಲಿ ಲೋಹಾದಿಗಳಲ್ಲಾಗಲಿ ಶಾಸ್ತ್ರೋಕ್ತ ಕ್ರಮದಲ್ಲಿ ಆಯಾ ಕ್ರಮದಂತೆ ಮಾಡಿ, ಅವುಗಳಿಗೆ ಷೋಡಶೋಪಚಾರ ಪೂಜೆಯನ್ನು ಮಾಡಿ ಮುಂದುಗಡೆ ಬಲಿಯನ್ನು ಹಾಕಬೇಕು. ಪ್ರತಿಷ್ಠಾ ಕಾಲದಲ್ಲಿ ಪೀಠಬಂಧನ, ಅಷ್ಟಬಂಧನ, ವಾಹನಾದಿ ಪ್ರತಿಷ್ಠೆ ಸ್ತಂಭ ಪ್ರತಿಷ್ಠೆ ಇತ್ಯಾದಿ ಕಾರ್ಯಗಳನ್ನು ನೆರವೇರಿಸುವಾಗ ಅವುಗಳ ಪೂಜಾ ಕಾರ್ಯಗಳನ್ನು ವಿಧಿವತ್ತಾಗಿ ನಡೆಸಬೇಕು.

ತತ ಶ್ಶಿಲ್ಪೀ ಪ್ರತಿಮಾಪ್ರತಿಷ್ಠಾಪನಾರ್ಥಂ ಶುಭಾನುಕೂಲಂ ಚಂದ್ರತಾರಾ ಬಲಯುತಂ ಕೇಂದ್ರಶುಭಗ್ರಹೈರ್ಯುತಂ ತ್ರಿಷಡಾದಿಸ್ಥಾನಪಾಪೈರ್ಯುತಂ ಶುದ್ಧೈ

ಕಾದಶಸ್ಥಾನಯುತಂ ಮಹಾದೋಷಾದಿರಹಿತಂ ಶುಭಲಗ್ನಂ ನಿರ್ಣಯಂ ಕೃತ್ವಾ, ತಮರ್ಥಂ ಯಜಮಾನಾಯಾದಿಶ್ಯ, ತತ್ಕರ್ಮ ವಿಶ್ವಕರ್ಮಾರ್ಪಣಂ ಕುರ್ಯಾತ್॥ ತತೋ ಯಜಮಾನಃ ಶಿಲ್ಪಿನಂ ಸಂಪೂಜ್ಯ, ವಸ್ತ್ರದ್ವಯಫಲತಾಂಬೂಲಯುಕ್ತ ಸಹಸ್ರಪರಿಮಿತಂ ನಿಷ್ಕಂ ದ್ರವ್ಯಂ ಸಮರ್ಪ್ಯ, ತೇನಾಶಿಷೋ ಗೃಹೀತ್ವಾ, ಪ್ರತಿಷ್ಠಾಪನಾಕರ್ಮ ಕರ್ತುಂ ಶಿಲ್ಪಿನಂ ಪ್ರಾರ್ಥಯೇತ್ ॥

ಅನಂತರ ಶಿಲ್ಪಿಯು ದೇವತಾ ಪ್ರತಿಷ್ಠಾಪನಾರ್ಥವಾಗಿ ಚಂದ್ರ ತಾರಾಬಲಯುತವಾದ ಕೇಂದ್ರ ಶುಭಗ್ರಹಯುತವಾದ ತ್ರಿಷಡಾಯಸ್ಥಾನ ಪಾಪಗ್ರಹಯುತವಾದ ಏಕಾದಶಸ್ಥಾನ ಶುದ್ಧವಾದ ದೋಷರಹಿತವಾದ, ಏಕವಿಂಶತಿಮಹಾದೋಷವರ್ಜಿತವಾದ ಶುಭಲಗ್ನವನ್ನು ನಿರ್ಣಯಿಸಿ, ಆ ವಿಷಯವನ್ನು ಯಜಮಾನನಿಗೆ ತಿಳಿಸಿ, ಆ ಕರ್ಮವನ್ನು ವಿಶ್ವಕರ್ಮಾರ್ಪಣ ಮಾಡಬೇಕು. ಆಗ ಯಜಮಾನನು ಶಿಲ್ಪಿಯನ್ನು ಪೂಜೆಮಾಡಿ, ವಸ್ತ್ರದ್ವಯ ಫಲತಾಂಬೂಲ ಸಹಿತವಾದ ಸಂಭಾವನಾ ದ್ರವ್ಯವನ್ನು ಶಿಲ್ಪಿಯ ಸನ್ನಿಧಿಯಲ್ಲಿ ಸಮರ್ಪಿಸಿ, ಆತನಿಂದ ಆಶೀರ್ವಾದ ಪಡೆದು ಪ್ರತಿಷ್ಠಾಕರ್ಮವನ್ನು ನಡೆಸಿಕೊಡಲು ಆ ಶಿಲ್ಪಿಯನ್ನು ಪ್ರಾರ್ಥಿಸಬೇಕು.

## ಪ್ರತಿಷ್ಠಾಯಾಗಮಂಟಪವಿಧಿಃ

ತತೋ ಯಜಮಾನೋ ದೇವಾಲಯಾತ್ಪೂರ್ವಭಾಗೇ ವಾ ಉತ್ತರಭಾಗೇ ವಾ ಷೋಡಶಹಸ್ತಂ ದ್ವಾತ್ರಿಂಶದ್ಧಸ್ತಂವಾ ಪ್ರತಿಷ್ಠಾಶಾಲಾಂ ಮಂಡಪಂ ಕಾರಯಿತ್ವಾ, ಮಧ್ಯೇ ಮಂಡಪನವಾಂಶವಿಸ್ತೃತಾಂ ಹಸ್ತೋಚ್ಛ್ರಾಂ ವೇದಿಂ, ತತ್ಪೂರ್ವತೋ ಹಸ್ತಮಾತ್ರಾಂ ಗ್ರಹವೇದಿಂ, ನೈರುತ್ಯೇ ಹಸ್ತಮಾತ್ರಾಂ ವಾಸ್ತುವೇದಿಂ, ಆಗ್ನೇಯೇ ಹಸ್ತಮಾತ್ರಾಂ ಅಂಕುರಾರ್ಪಣವೇದಿಂ, ವಾಯವ್ಯೇ ಹಸ್ತಮಾತ್ರಾಂ ಅಭಿಷೇಕವೇದಿಂ, ಈಶಾನ್ಯೇ ಹಸ್ತಮಾತ್ರಾಂ ಸ್ಥಂಡಿಲಂ ವಿರಚ್ಯ, ಮಧ್ಯವೇದ್ಯಾಂ ಸರ್ವತೋಭದ್ರಂಚ ಕೃತ್ವಾ, ತದುಪರಿ ವಿತಾನಕದಲೀಸ್ತಂಭಾದಿನಾ ಭೂಷಯಿತ್ವಾ, ಪ್ರತಿಷ್ಠಾದಿನಾತ್ಪೂರ್ವಂ ಅಯುಗ್ಮೇಽಹನಿ ಕರ್ಮ ಪ್ರಾರಭೇತ್ । ಅತ್ರ ಯಜಮಾನಃ ಸುಸ್ನಾತೋ ನೂತನವಸ್ತ್ರಧರಃ ಸಭಾರ್ಯಃ ಸ್ವಾಸನೇ ಉಪವಿಶ್ಯ ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, ಅಸ್ಯಾಂ ಮೂರ್ತೌ ದೇವಕಲಾಸಾನ್ನಿಧ್ಯಾರ್ಥಂ ಯಜಮಾನಸ್ಯ ಸಹಕುಟುಂಬಸ್ಯ ಸಹಪರಿವಾರಸ್ಯ ಅಸ್ಯ ರಾಷ್ಟ್ರಸ್ಯ ರಾಷ್ಟ್ರಾಧಿಪತೇಃ ಸರ್ವಾಭ್ಯಃ ಪ್ರಜಾಭ್ಯಶ್ಚ ದೀರ್ಘಾಯುರ್ಲಕ್ಷ್ಮೀಸ್ಸರ್ವಕಾಮಸಮೃದ್ಧ್ಯರ್ಥಂ ಅಕ್ಷಯಸುಖಕಾಮಾರ್ಥಂಚ ಶ್ರೀಮಾನ್............ ಗೋತ್ರಃ...............ಶರ್ಮಾಭಿಧೇಯೋಽಹಂ ಏಕಾಹಾಧಿವಾಸನಪಕ್ಷಮಾಶ್ರಿತ್ಯ ವಾಸ್ತುಗ್ರಹಸಹಿತಾಂ (ದೇವಾಲಯ ಗೋಪುರ ಪರಿವಾರಯುತಾಂ)........ದೇವತಾ ಮೂರ್ತಿಪ್ರತಿಷ್ಠಾಂ ಕರಿಷ್ಯೇ ಇತಿ ಸಂಕಲ್ಪ್ಯ, ತತ್ರ ಆಚಾರ್ಯ ವಿಶ್ವಕರ್ಮ ಋತ್ವಿಗ್ವರಣಂ ಕುರ್ಯಾತ್ ॥

ಯಜಮಾನನು ದೇವಾಲಯದ ಪೂರ್ವಭಾಗ ಅಥವಾ ಉತ್ತರ ಭಾಗದದಲ್ಲಿ ೧೬ ಹಸ್ತ ಪ್ರಮಾಣ ಅಥವಾ ೩೨ ಹಸ್ತ ಪ್ರಮಾಣವುಳ್ಳ ಪ್ರತಿಷ್ಠಾ ಶಾಲಾಮಂಟಪವನ್ನು ಮಾಡಿಸಿ, ಮಧ್ಯ

ಮಂಟಪದ ಒಂಭತ್ತನೇ ಒಂದು ಭಾಗವಾದ ಮಧ್ಯದಲ್ಲಿ ಒಂದು ಹಸ್ತಪ್ರಮಾಣ ಎತ್ತರವಾದ ವೇದಿಕೆಯನ್ನೂ, ಅದರ ಪೂರ್ವಕ್ಕೆ ಗ್ರಹ ವೇದಿಕೆಯನ್ನೂ, ನೈರುತ್ಯದಲ್ಲಿ ವಾಸ್ತುವೇದಿಕೆಯನ್ನೂ, ಆಗ್ನೇಯದಲ್ಲಿ ಅಂಕುರವೇದಿಕೆಯನ್ನೂ, ವಾಯವ್ಯದಲ್ಲಿ ಅಭಿಷೇಕವೇದಿಕೆಯನ್ನೂ, ಈಶಾನ್ಯದಲ್ಲಿ ಯಜ್ಞವೇದಿಕೆಯನ್ನೂ ವಿರಚಿಸಿ, ಆ ವೇದಿಕೆಗಳನ್ನೂ ಮಂಟಪವನ್ನೂ ಬಾಳೆಕಂಬ ಮಾವಿನಸೊಪ್ಪು ಎಳನೀರು ಪತ್ರ ಪುಷ್ಪಗಳು, ಧ್ವಜಗಳು ಮುಂತಾದುವುಗಳಿಂದ ಅಲಂಕರಿಸಿ, ಪ್ರತಿಷ್ಠಾ ದಿನದ ಹಿಂದೆ ಒಂದು, ಮೂರು, ಅಥವಾ ಐದು ಹೀಗೆ ಅಯುಗ್ಮವಾದ ದಿನದಲ್ಲಿ ಪ್ರತಿಷ್ಠಾ ಯಾಗಕಾರ್ಯವನ್ನು ಆರಂಭಿಸಬೇಕು. ಆಗ ಯಜಮಾನನು ಸುಸ್ನಾತನಾಗಿ, ಹೊಸವಸ್ತ್ರಗಳನ್ನು ಧರಿಸಿ ಪತ್ನೀಸಮೇತನಾಗಿ ಪೀಠದ ಮೇಲೆ ಕುಳಿತು ಆಚಮನ ಪ್ರಾಣಾಯಾಮ ಮಾಡಿ, ಸಂಕಲ್ಪಿಸಿ, ಆಚಾರ್ಯ ವಿಶ್ವಕರ್ಮ ಋತ್ವಿಗಾದಿ ಜನರ ವರಣ ಮಾಡಬೇಕು.

## ಆಚಾರ್ಯಋತ್ವಿಗ್ವರಣಂ

ತತ್ರ ಆದೌ ದೇವತಾಬಿಂಬಕೃತವಂತಂ ಶಿಲ್ಪಿನಂ ಅಹಂ........ಗೋತ್ರಂ.... ಶರ್ಮಾಣಂ ದೇವತಾಮೂರ್ತ್ಯಾಃ ನೇತ್ರೋನ್ಮೀಲನಪ್ರಾಣಪ್ರತಿಷ್ಠಾದಿ ಕರ್ಮ ಕರ್ತುಂ ಅಸ್ಮಿನ್ ಪ್ರತಿಷ್ಠಾಕರ್ಮಣಿ ಶಿಲ್ಪಿನಂ ತ್ವಾಂ ವೃಣೇ ।

ದೇವಾನಾಂ ನಾಮಧಾ ಸ್ತ್ವಷ್ಟಾ ರೂಪಧಾಶ್ಚ ಪಿತಾ ಪುರಾ ।
ಜಗತೋಽಸ್ಯ ಗುರು ಶ್ಶಿಲ್ಪೀ ಯಥಾ ಕರ್ಮಾಜ ಕಾರಣಃ ॥
ತಥಾತ್ವಂ ಲೋಕಸೌಖ್ಯಾರ್ಥಂ ಧರ್ಮಜ್ಞಾನವಿವೃದ್ಧಯೇ ।
ದೇವಸ್ಯಾಸ್ಯ ಪ್ರತಿಷ್ಠಾಯಾಂ ನಿರ್ಮಿತಸ್ಯ ತ್ವಯಾ ಪ್ರಭೋ ॥
ಪೂಜಾರ್ಥಂ ಪ್ರಾಣದಾತಾ ಭವ ಶಿಲ್ಪಿನ್ ಕೃಪಾಕರ ॥

ಇತಿ ಸಂಪ್ರಾರ್ಥ್ಯ ವೃಣುಯಾತ್ । ತತಃ ಆಚಾರ್ಯವಿಶ್ವಕರ್ಮಋತ್ವಿಗಾದೀನ್ ವೃಣುಯಾತ್ । ಶಿಲ್ಪ್ಯಾಚಾರ್ಯಾದೀನ್ ಪ್ರಣಮ್ಯ

ಆಚಾರ್ಯಾದಯ ಸ್ಸರ್ವೇ ಬ್ರಹ್ಮವಿದ್ಯಾವಿದೋ ಬುಧಾಃ ।
ವೈಶ್ವಕರ್ಮಣ್ಯಸಂಪನ್ನಾ ಯಾಗಕರ್ಮಕ್ರಿಯಾಪರಾಃ ॥
ಪ್ರತಿಷ್ಠಾಕರ್ಮನಿಷ್ಪತ್ತ್ಯೈ ಭವಂತೋಽಭ್ಯರ್ಥಿತಾ ಶ್ಶುಭಾಃ ।
ಸುಪ್ರಸನ್ನಾಃ ಪ್ರಕುರ್ವಂತು ಕರ್ಮೇದಂ ವಿಧಿಪೂರ್ವಕಂ ॥

ವಾಚಸ್ಪತ ಋತವಃ ಪಂಚ ಯೇನೋ ವೈಶ್ವಕರ್ಮಣಾಃ ಪರಿಯೇ ಸಂಬಭೂವುಃ । ಇಹೈವ ಪ್ರಾಣಃ ಸಖ್ಯೇನೋ ಅಸ್ತು ತಂತ್ವಾ ಪರಮೇಷ್ಠಿನ್ ಪರಿರೋಹಿತ ಆಯುಷಾ ವರ್ಚಸಾ ದಧಾತು ॥

ಇತಿ ಸಂಪ್ರಾರ್ಥಯೇತ್ । ತತಃ ತೇ ಸರ್ವೇ

ಸಗ್ಂಶಿತಂ ಮೇ........ಪುರೋಹಿತಃ । ವಾಜಸ್ಯೇಮಂ.... ಪುರೋಹಿತಾಃ ॥

ಇತಿ ಜಪ್ತ್ವಾ, ವೃತಾಸ್ಸರ್ವೇ ಪ್ರತಿಷ್ಠಾಕರ್ಮ ಕರಿಷ್ಯಾಮಃ ಇತಿ ಪ್ರತಿವದೇಯುಃ ||

ಮೊದಲು ದೇವತಾಬಿಂಬ ನಿರ್ಮಾಣಮಾಡಿದ ಶಿಲ್ಪಿಯನ್ನು ಆತನ ಗೋತ್ರ ಪ್ರವರ ನಾಮಧೇಯಗಳನ್ನು ಹೇಳಿ ಈ ಪ್ರಾಣಪ್ರತಿಷ್ಠಾಯಾಗಕರ್ಮದಲ್ಲಿ ದೇವತಾಮೂರ್ತಿಯ ನೇತ್ರೋನ್ಮೀಲನ ಪ್ರಾಣಪ್ರತಿಷ್ಠಾಪನಾದಿ ಕಾರ್ಯಗಳನ್ನು ನಡೆಸಲು ಶಿಲ್ಪಿಸ್ಥಾನಕ್ಕೆ ನಿಮ್ಮನ್ನು ವರಣ ಮಾಡುತ್ತೇನೆ ಎಂದು ಹೇಳಿ, ಪ್ರಾರ್ಥಿಸಿ ವರಣಮಾಡಿ, ಆಚಾರ್ಯ ವಿಶ್ವಕರ್ಮ ಋತ್ವಿಗಾದಿ ಸ್ಥಾನಗಳಿಗೆ ವೇದವಿದರಾದ ವೈಶ್ವಕರ್ಮಣರನ್ನು ವರಣ ಮಾಡಬೇಕು. ಎಲ್ಲರಿಗೂ ನಮಸ್ಕಾರಮಾಡಿ ಆಚಾರ್ಯಾದಯಃ, ವಾಚಸ್ಪತ ಮಂತ್ರಗಳಿಂದ ಪ್ರಾರ್ಥಿಸಬೇಕು. ಅವರೆಲ್ಲರೂ ನಿಮ್ಮಿಂದ ವರಣಮಾಡಲ್ಪಟ್ಟಿದ್ದೇವೆ. ಪ್ರತಿಷ್ಠಾ ಯಾಗದಲ್ಲಿ ಆಯಾ ಕರ್ಮಗಳನ್ನು ನಡೆಸುತ್ತೇವೆ ಎಂದು ಹೇಳಬೇಕು.

## ಯಾಗಶಾಲಾಪ್ರವೇಶನಂ

ಯಜಮಾನಃ ತಾನ್ ವೈದಿಕಾನ್ ನೂತನವಸ್ತ್ರಗಂಧಮಾಲ್ಯಾಂಬರವಸ್ತುಪವಿತ್ರಾದಿಭಿಃ ಸಂಪೂಜ್ಯ, ಪೂರ್ಣಕಂಭ ಪಯೋದಧಿ ಘೃತಶರ್ಕರ ನಾರಿಕೇಳ ಕದಳೀ ಫಲಾಕ್ಷತಪುಷ್ಪ ಪೂಗೀಫಲತಾಂಬೂಲ ಮಂಗಳಸಂಭಾರಸುವಾಸಿನೀಭಿಃ ಸಹಿತಃ ಸರ್ತ್ವಿಜೋ ಮಂಗಳಘೋಷೇಣ ಶಾಕುನಾದಿ ಮಂತ್ರಾನ್ ವಾಚಯನ್ ಮಂಡಪ ಪ್ರಾದಕ್ಷಿಣ್ಯೇನ ಗತ್ವಾ, ಪಶ್ಚಿಮ ದ್ವಾರೇಣ ಮಂಡಪಂ ಪ್ರವಿಶ್ಯ, ವೇದ್ಯಾಃ ನೈರುತ್ಯ ಭಾಗೇ ಉಪವಿಶೇತ್ । ಅಥ ವೇದ್ಯಾಃ ಪಶ್ಚಿಮಭಾಗೇ ಆಚಾರ್ಯಃ ಪೂರ್ವಮುಖಃ, ದಕ್ಷಿಣತೋ ವಿಶ್ವಕರ್ಮಾ ಉದಙ್ಮುಖಃ, ಉತ್ತರತಃ ಶಿಲ್ಪೀ ಪೂರ್ವಮುಖಃ, ಚತುರ್ದಿಕ್ಷು ಋತ್ವಿಜಃ ಪೂರ್ವಮುಖಾಶ್ಚ ಭದ್ರಪೀಠೇಷು ಉಪವಿಶೇಯುಃ । ಅಥಾಚಾರ್ಯಃ ಪ್ರಾಣಾನಾಯಮ್ಯ, ದೇಶಕಾಲೌ ಸ್ಮೃತ್ವಾ........ ದೇವಪ್ರತಿಷ್ಠಾಕರ್ಮಣಿ ಯಜಮಾನೇನ ವೃತೋಽಹಂ ವಿಹಿತಕರ್ಮ ಕರಿಷ್ಯೇ । ಕರ್ಮಾಧಿಕಾರಸಿದ್ಧ್ಯರ್ಥಂ ಸರ್ತ್ವಿಕ್ವಿಶ್ವಕರ್ಮಾಶಿಲ್ಪೀಸಮೇತೋಽಹಂ ವಿಶ್ವಕರ್ಮ ಸೂಕ್ತಪಾರಾಯಣಂ ಕರಿಷ್ಯೇ ಇತಿ ಸಂಕಲ್ಪ್ಯ, ವಿಶ್ವಕರ್ಮಸೂಕ್ತಪಾರಾಯಣಂ ಕೃತ್ವಾ, ತತಃ ಆದೌ ನಿರ್ವಿಘ್ನತಾಸಿದ್ಧ್ಯರ್ಥಂ ಮಹಾಗಣಾಧಿಪತಿಪೂಜಾಂ ಕೃತ್ವಾ, ಸ್ವಸ್ತಿ ಪುಣ್ಯಾಹವಾಚನಂ ನಾಂದೀಶ್ರಾದ್ಧಂ ಅಂಕುರಾರ್ಪಣಂಚ ಕುರ್ಯಾತ್ ||

ಯಜಮಾನನು ಅವರುಗಳೆಲ್ಲರನ್ನೂ ಹೊಸ ವಸ್ತ್ರಗಳು ಗಂಧಪುಷ್ಪಾಕ್ಷತೆ ಪವಿತ್ರಗಳಿಂದ ಸತ್ಕರಿಸಿ, ಪೂರ್ಣಕುಂಭ ಹಾಲು ಮೊಸರು ತುಪ್ಪ ಜೇನು ಸಕ್ಕರೆ ಎಳನೀರು ಬಾಳೆಹಣ್ಣು ಅಕ್ಷತೆ ಹೂ ಎಲೆ ಅಡಿಕೆ ಇತ್ಯಾದಿ ಮಂಗಳದ್ರವ್ಯ ಸಮೇತರಾದ ಸುಮಂಗಲಿಯರಿಂದಲೂ ಶಿಲ್ಪೀ ಋತ್ವಿಗಾಚಾರ್ಯಾದಿಗಳಿಂದಲೂ ಪರಿವೃತನಾಗಿ ವಾದ್ಯಘೋಷದಿಂದ ಶಾಕುನಸೂಕ್ತ ಪಾರಾಯಣಮಾಡುತ್ತಾ ಯಾಗಮಂಟಪವನ್ನು ಪ್ರದಕ್ಷಿಣೆಯಾಗಿ ಬಳಸಿ, ಪಶ್ಚಿಮ ದ್ವಾರದಿಂದ ಮಂಟಪ ಪ್ರವೇಶಮಾಡಿ, ವೇದಿಕೆಗಳ ನೈರುತ್ಯ ಭಾಗದಲ್ಲಿ ಕುಳಿತುಕೊಳ್ಳಬೇಕು. ವೇದಿಕೆಯ ಪಶ್ಚಿಮ ಭಾಗದಲ್ಲಿ ಆಚಾರ್ಯನು ಪೂರ್ವಮುಖನಾಗಿಯೂ, ದಕ್ಷಿಣದಲ್ಲಿ ವಿಶ್ವಕರ್ಮನು ಉದಙ್ಮುಖನಾಗಿಯೂ, ಉತ್ತರದಲ್ಲಿ ಶಿಲ್ಪಿಯು ಪೂರ್ವಮುಖ

ಸಾಗಿಯೂ, ನಾಲ್ಕು ದಿಕ್ಕುಗಳಲ್ಲಿಯೂ ಋತ್ವಿಕ್ಕರು ಪೂರ್ವಮುಖರಾಗಿಯೂ ಪೀಠಗಳ ಮೇಲೆ ಕುಳಿತುಕೊಳ್ಳಬೇಕು. ಆಚಾರ್ಯನು ಸಂಕಲ್ಪಮಾಡಿ, ಯಜಮಾನನಿಂದ ನಿಯಮಿತರಾದ ನಾವುಗಳು ಆಯಾ ಕರ್ಮಾಧಿಕಾರ ಸಿದ್ಧಿಗಾಗಿ ವಿಶ್ವಕರ್ಮಸೂಕ್ತ ಪಾರಾಯಣ ಮಾಡುತ್ತೇವೆ ಎಂದು ಹೇಳಿ ಸೂಕ್ತಪಾರಾಯಣವನ್ನು ಮಾಡಿ, ಮಹಾಗಣಪತಿಪೂಜೆ ಪುಣ್ಯಾಹವಾಚನ ನಾಂದೀಶ್ರಾದ್ಧ ಅಂಕುರಾರ್ಪಣಾದಿಗಳನ್ನು ಮಾಡಬೇಕು.

## ದೇವಪ್ರತಿಮಾಹರಣಂ

ಸಾಚಾರ್ಯೋ ಯಜಮಾನಃ ವೇದಘೋಷಮಂಗಳವಾದ್ಯಛತ್ರಚಾಮರ ರಥಾದಿಯಾನಸಹಿತಃ ಶಿಲ್ಪಿನಂ ಪುರತಃ ಕೃತ್ವಾ, ಶಿಲ್ಪಶಾಲಾಂ ಪ್ರವಿಶ್ಯ, ತತ್ರ ಪ್ರತಿಮಾಂ ದೃಷ್ಟ್ವಾ,

ಅತ್ರಾ ತೇ ರೂಪ ಮುತ್ತಮ ಮಪಶ್ಯಂ ಜಿಗೀಷಮಾಣ ಮಿಷ ಆಪದೇಗೋಃ।

ಯದಾ ತೇ ಮರ್ತೋ ಅನುಭೋಗಮಾನಡಾದಿದ್ಗ್ರಸಿಷ್ಠ ಓಷಧೀ ರಜೀಗಃ॥

ಇತಿ ಮಂತ್ರಮುಚ್ಚಾರ್ಯ, ಪ್ರತಿಮಾಂ ವಸ್ತ್ರಚಂದನಪುಷ್ಪಾದಿಭಿಸ್ಸಂಪೂಜ್ಯ, ಕುದ್ದಾಲಶಲಾಕಾದೀನಿ ಶಿಲ್ಪಶಸ್ತ್ರಾಣಿಚ ಹರಿದ್ರಾದಿನಾ ಭೂಷಯಿತ್ವಾ, ತತ್ರ ಶಿಲ್ಪಿನಂ ವಸ್ತ್ರಗಂಧಮಾಲ್ಯಾದಿಭಿಃ ಸಂತೋಷ್ಯ,

ನಮೋ ವಿಶ್ವಕರ್ಮಣೇ ಸಉಪಾತ್ವಸ್ಮಾನನನ್ಯಾ ತ್ಸೋಮಪಾನ್ಮನ್ಯ ಮಾನಃ। ಪ್ರಾಣಸ್ಯ ವಿದ್ವಾ ತ್ಸಮರೇನ ಧೀರ ಏನಶ್ಚ ಕೃವಾ ಮಹಿ ಬದ್ಧ ಏಷಾಂ। ತಂ ವಿಶ್ವಕರ್ಮ ಪ್ರಮುಂಚಾ ಸ್ವಸ್ತಯೇ ಯೇ ಭಕ್ಷ ಯಂತೋ ನವಸೂನ್ಯಾನೃಹುಃ। ಯಾನಗ್ನಯೋ ನ್ವತಪ್ಯಂತ ಧಿಷ್ಣಿಯಾ ಇಯಂ ತೇಷಾ ಮುವಯಾ ದುರಿಷ್ಟ್ಯೈ ಸ್ವಿಷ್ಟಿಂ ನಸ್ತಾಂ ಕೃಣೋತು ವಿಶ್ವಕರ್ಮಾ॥

ಇತಿ ಶಿಲ್ಪಿನಂ ನಮಸ್ಕೃತ್ಯ, ತೇನಾಶಿಷೋ ಗೃಹೀತ್ವಾ, ರಥೇ ಯಾನೇ ವಾ ಪ್ರತಿಮಾಮಾರೋಪ್ಯ, ಶಾಕುನಾದಿ ಮಂತ್ರಾ ವಾಚಯಿತ್ವಾ, ಮಂಗಳವಾದ್ಯವೇದ ಘೋಷೈಃ ಶಿಲ್ಪಿನಂ ಪುರತಃ ಕೃತ್ವಾ, ಪ್ರತಿಷ್ಠಾಶಾಲಾಂ ಪ್ರವಿಶ್ಯ, ವೇದ್ಯಾಂ ವಾಯವ್ಯಭಾಗೇ ಅಭಿಷೇಕವೇದಿಕಾಯಾಂ ಜಲಾಧಿವಾಸಂ ಕುರ್ಯಾತ್॥

ಯಜಮಾನನು ಆಚಾರ್ಯ ಸಮೇತನಾಗಿ ವೇದಘೋಷ ಮಂಗಳವಾದ್ಯ ಛತ್ರ ಚಾಮರ ಸಮೇತವಾದ ರಥ ಅಥವಾ ಮೇನಾದಿಗಳಿಂದ ಕೂಡಿ ಶಿಲ್ಪಶಾಲೆಯನ್ನು ಪ್ರವೇಶಿಸಿ, ಅಲ್ಲಿ ದೇವತಾಪ್ರತಿಮೆಯನ್ನು ನೋಡಿ, ಅತ್ರಾತೇ ಮಂತ್ರವನ್ನು ಹೇಳಿ, ವಿಗ್ರಹಕ್ಕೆ ಪೂಜೆ ಮಾಡಿ, ಸುತ್ತಿಗೆ ಉಳಿ ವಿಭಾಗಯಂತ್ರಾದಿ ಆಯುಧಗಳನ್ನು ಪೂಜಿಸಿ, ಶಿಲ್ಪಿಯನ್ನು ಗಂಧ ಮಾಲ್ಯಾದಿಗಳಿಂದ ಸತ್ಕರಿಸಿ, ನಮೋ ವಿಶ್ವಕರ್ಮಣೇ ಮಂತ್ರದಿಂದ ನಮಸ್ಕರಿಸಿ, ಆತನಿಂದ ಆಶೀರ್ವಾದವನ್ನು ಪಡೆದು, ರಥ ಅಥವಾ ಪಲ್ಲಕ್ಕಿ ಮುಂತಾದವುಗಳಲ್ಲಿ ದೇವರ ವಿಗ್ರಹ ವನ್ನಿರಿಸಿ, ಶಾಕುನಸೂಕ್ತ ಪಾರಾಯಣ ಮಾಡುತ್ತಾ ಶಿಲ್ಪಿಯನ್ನು ಮುಂದಕ್ಕೆ ಬಿಟ್ಟುಕೊಂಡು ಯಾಗಶಾಲೆಯನ್ನು ಪ್ರವೇಶಮಾಡಿ ಮಂಟಪದ ವಾಯವ್ಯಭಾಗದ ವೇದಿಕೆಯಲ್ಲಿ ವಿಗ್ರಹ ವನ್ನು ಪೂರ್ವಮುಖವಾಗಿರಿಸಿ ಜಲಾಧಿವಾಸವನ್ನು ಪ್ರಾರಂಭಿಸಬೇಕು.

## ಜಲಾಧಿವಾಸಃ

ದೇಶಕಾಲೌ ಸಂಕೀರ್ತ್ಯ, ಅಸ್ಯಾಃ........ದೇವಪ್ರತಿಮಾಯಾಃ ಸರ್ವಾಂಗ ಶುದ್ಧ್ಯರ್ಥಂ ಜಲಾಧಿವಾಸಂ ಕರಿಷ್ಯೇ ಇತಿ ಸಂಕಲ್ಪ್ಯ, ಪಂಚಗವ್ಯ ಹಿರಣ್ಯ ದೂರ್ವಾ ಶ್ವತ್ಥ ಪಲಾಶಪರ್ಣಾನಿ ಪಂಚಾಮೃತತ್ವಕ್‌ಪಲ್ಲವಾಃ ಉದುಂಬರ ಕುಶ ರಕ್ತೋತ್ಪಲ ಚಂಪಕ ಬಿಲ್ವ ವಿಷ್ಣುಕ್ರಾಂತಾ ತುಲಸೀ ಬರ್ಹಿಶ್ಯಂಖಪುಷ್ಪೀ ಶತಾವರ್ಯಶ್ವಗಂಧಾ ನಿರ್ಗುಂಡೀ ರಕ್ತಪೀತ ಸರ್ಷಪಾಪಾಮಾರ್ಗ ಪಲಾಶ ಪನಸ ಜೀವಕ ಪ್ರಿಯಂಗು ಗೋಧೂಮವ್ರೀಹಿ ಪದ್ಮಪತ್ರ ನೀಲೋತ್ಪಲ ಸಿತಪೀತಕರುಂಟಕ ಗುಂಜಾವಚಾ ಭದ್ರಮುಸ್ತಕಾದೀನ್ಯೌಷಧಾನಿ ಉದಕುಂಭೇ ಪ್ರಕ್ಷಿಪ್ಯ, ದೇವಹಸ್ತೇ ಹಿರಣ್ಮಯಂ ಪವಿತ್ರಗ್ರಂಥಿಂ ಕಂಕಣಂ ಬಧ್ವಾ, ಹಿರಣ್ಯವರ್ಣಾ ಆಪೋಹಿಷ್ಠಾ ಪವಮಾನಸ್ಸುವ ರ್ಜನ ಇತಿ ಮಂತ್ರೈಃ ಜಲೇ ಅಧಿವಾಸಯೇತ್ । ತತಃ ಪಂಚಸೂಕ್ತಾನಿ ಪಾರಾ ಯಣಂ ಕೃತ್ವಾ, ಧೂಪದೀಪ ನೀರಾಜನೈಃ ಸಂಪೂಜ್ಯ, ದೇವಂ ನತ್ವಾ,

ಸ್ವಾಗತಂ ದೇವದೇವೇಶ ವಿಶ್ವರೂಪ ನಮೋಸ್ತುತೇ ।
ಶುದ್ಧೇಪಿ ತ್ವದದಿಷ್ಠಾನೇ ಶುದ್ಧಿಂಕರ್ಮ ಸಹಸ್ವತಾಂ ॥

ಇತಿ ಸಂಪ್ರಾರ್ಥ್ಯ, ಮುಹೂರ್ತತ್ರಯಂ ವೇದಪಾರಾಯಣಂ ಕೃತ್ವಾ, ತತಃ

ಉತ್ತಿಷ್ಠ ಬ್ರಹ್ಮಣಸ್ಪತೇ ದೇವಾ‌ನ್ ಯಜ್ಞೇನ ಬೋಧಯ । ಆಯುಃ ಪ್ರಾಣಂ ಪ್ರಜಾಂ ಪಶೂನ್ ಕೀರ್ತಿಂ ಯಜಮಾನಂಚ ವರ್ಧಯ ॥

ಇತಿ ಪ್ರತಿಮಾ ಮುತ್ಥಾಪ್ಯ, ಕ್ಷೀರಾಧಿವಾಸಂ ಕುರ್ಯಾತ್ ॥

ದೇವರಿಗೆ ಪ್ರತಿಷ್ಠಾಪನಾಂಗವಾಗಿ ಜಲಾಧಿವಾಸವನ್ನು ಮಾಡಿಸುತ್ತೇನೆಂದು ಆಚಾರ್ಯನು ಸಂಕಲ್ಪಿಸಿ, ಪಂಚಗವ್ಯ ಚಿನ್ನ ಗರಿಕೆ, ಅರಳೀಎಲೆ ಮುತ್ತುಗದೆಲೆ ಪಂಚಾಮೃತ, ಚಿಗುರು ತೊಗಟೆಗಳು ಅತ್ತಿಎಲೆ ದರ್ಭೆ ರಕ್ತೋತ್ಪಲ ಸಂಪಿಗೆ, ಬಿಲ್ವಪತ್ರೆ ವಿಷ್ಣುಕ್ರಾಂತಿ ತುಲಸೀ ಇತ್ಯಾದಿ ೩೪ ಅಥವಾ ಯಥಾಶಕ್ತಿ ಔಷಧ ವಸ್ತುಗಳನ್ನು ದೊಡ್ಡ ಪಾತ್ರೆಯಲ್ಲಿರುವ ನೀರಿಗೆ

ಹಾಕಿ, ದೇವರ ಹಸ್ತಕ್ಕೆ ಚಿನ್ನದ ಪವಿತ್ರವನ್ನು ಕಂಕಣಕಟ್ಟಿ, ಹಿರಣ್ಯವರ್ಣಾ ಇತ್ಯಾದಿ ಮಂತ್ರಗಳಿಂದ ಆ ಜಲದಲ್ಲಿ ದೇವರನ್ನು ಇಟ್ಟು ಅಧಿವಾಸ ಮಾಡಬೇಕು, ಅನಂತರ ಐದು ಸೂಕ್ತಗಳ ಪಾರಾಯಣವನ್ನು ಮಾಡಿ, ಪೂಜೆಮಾಡಿ, ನಮಸ್ಕರಿಸಿ, ಸ್ವಾಗತಂ ಮಂತ್ರದಿಂದ ಪ್ರಾರ್ಥಿಸಿ, ಮೂರು ಮುಹೂರ್ತಕಾಲ ವೇದಪಾರಾಯಣ ಮಾಡಿ ಅನಂತರ ಉತ್ತಿಷ್ಠ ಮಂತ್ರದಿಂದ ದೇವರನ್ನು ತೆಗೆದು ಕ್ಷೀರಾಧಿವಾಸವನ್ನು ಮಾಡಬೇಕು.

## ಕ್ಷೀರಾಧಿವಾಸಃ

ದೇಶಕಾಲೌ ಸಂಕೀರ್ತ್ಯ, ಅಸ್ಯಾಃ....ದೇವಪ್ರತಿಮಾಯಾಃ ಅಂಗಪ್ರತ್ಯಂಗ ಸಂಧಿಸಮುತ್ಪನ್ನ ವಾಸ್ಯಾಗ್ನಿ ಕುದ್ದಾಲಾಗ್ನಿ ಟಂಕಾಗ್ನ್ಯಾತಪನಿರಾಸಾರ್ಥಂ ಕ್ಷೀರಾಧಿವಾಸಂ ಕರಿಷ್ಯೇ ಇತಿ ಸಂಕಲ್ಪ್ಯ, ಪಂಚಗವ್ಯ ಪಂಚತ್ವಕ್ ಪಂಚಪಲ್ಲವ ಪಂಚಾಮೃತೈ ರದ್ಭಿಶ್ಚ ಪಂಚಸೂಕ್ತೈಃ ಪ್ರತಿಮಾಮಭಿಷಿಚ್ಯ, ಕ್ಷೀರಕುಂಭಂ ಸಂಪೂಜ್ಯ,

ಆಪ್ಯಾಯಸ್ವ ಸಮೇತುತೇ ವಿಶ್ವತಸ್ಸೋಮವೃಷ್ಣಿಯಂ । ಭವಾ ವಾಜಸ್ಯ ಸಂಗಥೇ ॥ ಸಂತೇ ಪಯಾಗ್ಂಸಿ ಸಮುಯಂತು ವಾಜಾ ಸಂವೃಷ್ಣಿಯಾನ್ಯಭಿಮಾತಿಷಾಹಃ । ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಗ್ಂ ಸ್ಯುತ್ತಮಾನಿ ಧಿಷ್ವ ॥ ಪಯಃ ಪೃಥಿವ್ಯಾಂ ಪಯ ಓಷಧೀಷು ಪಯೋ ದಿವ್ಯಂತರಿಕ್ಷೇ ಪಯೋಧಾಂ । ಪಯಸ್ವತೀಃ ಪ್ರದಿಶ ಸ್ಸಂತು ಮಹ್ಯಂ ॥ ಸಂಮಾ ಸೃಜಾಮಿ ಪಯಸಾ ಘೃತೇನ ಸಂಮಾ ಸೃಜಾಮ್ಯಪ ಓಷಧೀಭಿಃ । ಸೋಹಂ ವಾಜಗ್ಂ ಸನೇಯಮಗ್ನೇ ॥ ಆದಿತ್ಯಂ ಗರ್ಭಂ ಪಯಸಾ ಸಮಂಜ್ಞ ತ್ಸಹಸ್ರಸ್ಯ ಪ್ರತಿಮಾಂ ವಿಶ್ವರೂಪಂ । ಪರಿವೃಂಧಿ ಹರಸಾ ಮಾಭಿಮೃಕ್ಷ ಶ್ಶತಾಯುಷಂ ಕೃಣುಹಿ ಚೀಯಮಾನಃ ॥

ಇತಿ ಪ್ರತಿಮಾಂ ಕ್ಷೀರೇ ಅಧಿವಾಸಯೇತ್ । ಧೂಪದೀಪನೀರಾಜನೈಃ ಸಂಪೂಜ್ಯ, ಮುಹೂರ್ತತ್ರಯಂ ವೇದಪಾರಾಯಣಂ ಕೃತ್ವಾ, ಉತ್ತಿಷ್ಠ ಬ್ರಹ್ಮಣಸ್ಪತೇ ಇತಿ ಪ್ರತಿಮಾ ಮುತ್ಥಾಪ್ಯ, ಉಷ್ಣೋದಕೇನ ಪ್ರಕ್ಷಾಳ್ಯ, ಗಂಧಂ ದತ್ವಾ ಪುನಸ್ಸಂಸ್ಥಾಪಯೇತ್ ॥

ಪ್ರತಿಷ್ಠಾಪನಾಂಗವಾಗಿ ದೇವತಾನಿರ್ಮಾಣ ಕಾಲದಲ್ಲಿ ಅಂಗಪ್ರತ್ಯಂಗಗಳನ್ನು ಬಿಡಿಸುವಾಗ ಉಂಟಾದ ವಾಸ್ಯಾಗ್ನಿ ಕುದ್ದಾಲಾಗ್ನಿ ಟಂಕಾಗ್ನಿಗಳ ಶಾಖ ನಿವಾರಣಾರ್ಥವಾಗಿ ದೇವರಿಗೆ ಕ್ಷೀರಾಧಿವಾಸವನ್ನು ಮಾಡಿಸುತ್ತೇನೆ ಎಂದು ಸಂಕಲ್ಪಿಸಿ, ಪಂಚಗವ್ಯ, ಪಂಚತ್ವಕ್

ಪಲ್ಲವ ಪಂಚಾಮೃತಗಳಿಂದ ಅಭಿಷೇಕಮಾಡಿ ಹಾಲನ್ನು ತುಂಬಿದ ದೊಡ್ಡ ಪಾತ್ರೆಯನ್ನು ಪೂಜಿಸಿ, ಆಪ್ಯಾಯಸ್ವ ಮಂತ್ರಗಳಿಂದ ದೇವರ ವಿಗ್ರಹವನ್ನು ಹಾಲಿನಲ್ಲಿಟ್ಟು ಅಧಿವಾಸನ ಮಾಡಬೇಕು. ಪೂಜೆಮಾಡಿ ಮೂರು ಮುಹೂರ್ತಕಾಲ ವೇದಪಾರಾಯಣ ಮಾಡಿ, ಉತ್ತಿಷ್ಠ ಮಂತ್ರದಿಂದ ದೇವರನ್ನು ತೆಗೆದು ಬಿಸಿನೀರಿನಿಂದ ಅಭಿಷೇಕಮಾಡಿ, ಎಲ್ಲ ಅಂಗಗಳಿಗೂ ಶ್ರೀಗಂಧವನ್ನು ಇಟ್ಟು ಪುನಃ ಸ್ನಾನಮಾಡಿಸಬೇಕು.

## ಧಾನ್ಯಾಧಿವಾಸಃ

ದೇಶಕಾಲೌ ಸಂಕೀರ್ತ್ಯ, ಅಸ್ಯಾಃ...........ದೇವಪ್ರತಿಮಾಯಾಃ ಅಂಗ ಪ್ರತ್ಯಂಗದೃಢತಾಸಿದ್ಧ್ಯರ್ಥಂ ಧಾನ್ಯಾಧಿವಾಸಂ ಕರಿಷ್ಯೇ ಇತಿ ಸಂಕಲ್ಪ್ಯ, ಶುದ್ಧ ಸ್ಥಲೇ ಗೋಮಯೇನೋಪಲಿಪ್ಯ, ರಂಗವಲ್ಲ್ಯಾದಿಭಿರಲಂಕೃತ್ಯ,

ಋಕ್ಸಾಮೇವೈ ದೇವೇಭ್ಯೋ ಯಜ್ಞಾಯಾತಿಷ್ಠಮಾನೇ ಕೃಷ್ಣೋರೂಪಂ ಕೃತ್ವಾ ಪಕ್ರಮ್ಯಾತಿಷ್ಠತಾಂ ತೇಽಮನ್ಯಂತ ಯಂವಾ ಇಮೇ ಉಪಾವರ್ತ್ಸ್ಯತಸ್ಸ ಇದಂ ಭವಿಷ್ಯತೀತಿ ತೇ ಉಪಾಮಂತ್ರಯಂತ ತೇ ಅಹೋರಾತ್ರಯೋರ್ಮಹಿಮಾನ ಮುಪನಿಧಾಯ ದೇವಾ ನುಪಾವರ್ತೇತಾಮೇಷವಾ ಋಚೋ ವರ್ಣೋ ಯಚ್ಛುಕ್ಲಂ ಕೃಷ್ಣಾಜಿನಸ್ಯೈಷಸಾಮ್ನೋ ಯತ್ಕೃಷ್ಣ ಮೃಕ್ಸಾಮಯೋ ಶ್ಶಿಲ್ಪೇಸ್ಥ ಇತ್ಯಾಹರ್ಕ್ಸಾಮೇ ಏವಾವರುಂಧೇ ॥

ಇತಿ ಕೃಷ್ಣಾಜಿನಂ ಪ್ರಸಾರ್ಯ, ತತ್ರ ಪ್ರತಿಮಾ ಮುಪವೇಶ್ಯ, ಅನ್ನಪತೇಽನ್ನಸ್ಯ ಇತ್ಯನುವಾಕೇನ ವ್ರೀಹೀ ವರ್ಷಯಿತ್ವಾ ಧಾನ್ಯೇಷು ಅಧಿವಾಸಯೇತ್ । ಧೂಪದೀಪನೀರಾಜನೈಃ ಸಂಪೂಜ್ಯ, ಮುಹೂರ್ತತ್ರಯಂ ವೇದಪಾರಾಯಣಂ ಕೃತ್ವಾ, ಉತ್ತಿಷ್ಠ ಬ್ರಹ್ಮಣಸ್ಪತೇ ಇತಿ ಪ್ರತಿಮಾ ಮುತ್ಥಾಪ್ಯ, ಹರಿದ್ರೋದಕೇನ ಸಂಸ್ನಾಪಯೇತ್ ॥

ಪ್ರತಿಷ್ಠಾಪನಾಂಗವಾಗಿ, ದೇವತಾಪ್ರತಿಮೆಯು ಅಂಗ ಪ್ರತ್ಯಂಗ ದೃಢತಾಸಿದ್ಧಿಗಾಗಿ ಧಾನ್ಯಾಧಿವಾಸವನ್ನು ಮಾಡಿಸುತ್ತೇನೆ ಎಂದು ಸಂಕಲ್ಪಿಸಿ, ಶುದ್ಧವಾದ ಸ್ಥಳದಲ್ಲಿ ಸಾರಿಸಿ, ರಂಗವಲ್ಲಿಯನ್ನಿಟ್ಟು ಋಕ್ಸಾಮೇವೈ ಮಂತ್ರದಿಂದ ಕೃಷ್ಣಾಜಿನವನ್ನು ಹಾಸಿ, ಅದರ ಮೇಲೆ ಪ್ರತಿಮೆಯನ್ನು ಕೂರಿಸಿ ಅನ್ನಪತೇ ಅನ್ನಸ್ಯ ಮಂತ್ರದಿಂದ ಭತ್ತವನ್ನು ಪ್ರತಿಮೆಯು ಮುಚ್ಚುವಂತೆ ಸುರಿದು ಅಧಿವಾಸ ಮಾಡಬೇಕು. ಪೂಜೆಮಾಡಿ ಮೂರು ಮುಹೂರ್ತ ವೇದಪಾರಾಯಣಮಾಡಿ, ಉತ್ತಿಷ್ಠ ಮಂತ್ರದಿಂದ ದೇವರನ್ನು ತೆಗೆದು ಹರಿದ್ರೋದಕದಿಂದ ಸ್ನಾನ ಮಾಡಿಸಬೇಕು.

## ಶಯ್ಯಾಧಿವಾಸಃ

ದೇಶಕಾಲೌ ಸಂಕೀರ್ತ್ಯ, ಅಸ್ಯಾಃ—ಪ್ರತಿಮಾಯಾಃ ದೇವತ್ವಸಾನ್ನಿಧ್ಯಾರ್ಥಂ ಯೋಗನಿದ್ರಾವಾಹನೇನ ಸಾತ್ವಿಕಫಲದಾಯಕತ್ವಸಿದ್ಧ್ಯರ್ಥಂಚ ಶಯ್ಯಾಧಿವಾಸಂ ಕರಿಷ್ಯೇ ಇತಿ ಸಂಕಲ್ಪ್ಯ, ಶುದ್ಧಸ್ಥಲೇ ಗೋಮಯೇನೋಪಲಿಪ್ತೇ ರಂಗವಲ್ಲ್ಯಾದಿಭಿ ರಲಂಕೃತ್ಯ, ಸುಧೂಪಿತಂ ತಲ್ಪಂ ನಿಕ್ಷಿಪ್ಯ, ತತ್ರ ಋಕ್ಸಾಮೇಪ್ಯೈ ದೇವೇಭ್ಯ ಇತಿ ಕೃಷ್ಣಾಜಿನಂ ಪ್ರಸಾರ್ಯ, ತದುಪರಿ ನೂತನಂ ವಸ್ತ್ರಂ ಪ್ರಸಾರ್ಯ, ತತ್ರ ಪ್ರತಿಮಾಂ

ಯಚ್ಛುಕ್ಲಂ ಕೃಷ್ಣಾಜಿನಸ್ಯೈಷರಾತ್ರಿಯಾ ಯತ್ಕೃಷ್ಣಂ ಯದೇವೈನಯೋಸ್ತತ್ರ ನ್ಯಕ್ತಂ ತದೇವಾವರುಂಧೇ । ಸಂವತ್ಸರಸ್ಯ ಪ್ರತಿಮಾಂ ಯಾಂತ್ವಾ ರಾತ್ರ್ಯುಪಾಸ್ಮಹೇ । ಸಾನ ಆಯುಷ್ಮಂತೀಂ ಪ್ರಜಾಂ ರಾಯಸ್ಪೋಷೇಣ ಸಂಸೃಜ ॥

ಇತಿ ಶಾಯಯಿತ್ವಾ, ವಸ್ತ್ರದ್ವಯೇನ ಪ್ರಚ್ಛಾದ್ಯ, ದೇವಸ್ಯ ಶಿರೋಭಾಗೇ ಸಪಲ್ಲವಫಲಂ ಪೂರ್ಣಕುಂಭಂ ಸಂಸ್ಥಾಪ್ಯ, ನಿದ್ರಾಮಾವಾಹಯೇತ್ ।

ದೇವದೇವಂ ನಮಸ್ಕೃತ್ಯ ನಿದ್ರಾಮಾವಾಹಯಾಮ್ಯಹಂ ।
ಮೋಹಿನೀಂ ಸರ್ವಭೂತಾನಾಂ ಜ್ಞಾನರೂಪಾಂ ಮನೋನ್ಮಯೀಂ ॥
ಏಹಿ ಸಾವಿತ್ರಿ ಮೂರ್ತಿಸ್ತ್ವಂ ಚಕ್ಷುಭ್ಯಾಂ ಜ್ಞಾನಗೋಚರೇ ।
ವಿಶ ನಾಸಾಪುಟೇ ದೇವಿ ಕಂಠೇ ಜೋತ್ಕಂಠಿತಾ ಭವ ॥
ವಿಶ್ವರೂಪಧರ ಶ್ರೀರ್ಮ ದೇವದೇವ ಜಗತ್ಪತೇ ।
ಸುಖಶಾಯೀ ಭವ ಜ್ಞಾನನಿದ್ರಾಂ ಕುರು ಕೃಪಾಕರ ॥

ಇತಿ ಸಂಪ್ರಾರ್ಥ್ಯ, ಮಂಡಲಶಯ್ಯಯೋರಂತರಾ ನಗಂತವ್ಯ ಮಿತಿ ಪ್ರೈಷಂ ದತ್ವಾ, ಧ್ಯಾನಾದಿ ನೀರಾಜನಾಂತಂ ಕೃತ್ವಾ, ಪಂಚಸೂಕ್ತಪಾರಾಯಣಂ ವೇದ ಪಾರಾಯಣಂ ಚ ಕುರ್ಯಾತ್ ॥

ಪ್ರತಿಷ್ಠಾಪನಾಂಗವಾಗಿ ಪ್ರತಿಮೆಯಲ್ಲಿ ಯೋಗನಿದ್ರಾವಾಹನ ಮೂಲಕ ದೇವತ್ವ ಸಾನ್ನಿಧ್ಯಾರ್ಥವಾಗಿ ಶಯ್ಯಾಧಿವಾಸವನ್ನು ಮಾಡಿಸುತ್ತೇನೆ ಎಂದು ಸಂಕಲ್ಪಿಸಿ, ಶುದ್ಧ ಸ್ಥಲದಲ್ಲಿ ಸಾರಿಸಿ ರಂಗವಲ್ಲಿಯನ್ನಿಟ್ಟು, ಸುಧೂಪಿತವಾದ ಮಂಚವನ್ನಿರಿಸಿ, ಅದರ ಮೇಲೆ ಋಕ್ಸಾಮೇಪ್ಯೈ ಮಂತ್ರದಿಂದ ಕೃಷ್ಣಾಜಿನವನ್ನೂ ಹೊಸವಸ್ತ್ರವನ್ನೂ ಹಾಸಿ ಅಲ್ಲಿ ದೇವರನ್ನು ಯಚ್ಛುಕ್ಲಂ ಮಂತ್ರದಿಂದ ಮಲಗಿಸಿ, ವಸ್ತ್ರದ್ವಯವನ್ನು ಹೊದೆಸಿ, ಶಿರೋಭಾಗದಲ್ಲಿ ನೀರಿನಿಂದ ತುಂಬಿದ ಮಾವಿನಕೊನೆ ತೆಂಗಿನಕಾಯಿಗಳಿಂದ ಅಲಂಕರಿಸಲ್ಪಟ್ಟ ಪೂರ್ಣಕುಂಭವನ್ನಿರಿಸಿ,

ಯೋಗನಿದ್ರೆಯನ್ನಾವಾಹಿಸಿ, ಪ್ರಾರ್ಥಿಸಿ, ಪೂಜಿಮಾಡಿ, ಹೊರಗೆ ಕಾಣದಂತೆ ಮರೆಮಾಡಿ, ವೇದಪಾರಾಯಣವನ್ನು ಮಾಡಬೇಕು.

## ಕಲಶಸ್ಥಾಪನಂ

ತತಃ ಪ್ರಧಾನದೇವತಾ ಅಧಿಪ್ರತ್ಯಧಿದೇವತೇ ಅಂಗತತ್ವಕಲಾದೇವತಾದೀನ್ ಕಲಶಾನ್ ಸಂಸ್ಥಾಪಯೇತ್ । ಯಥಾ ಪ್ರಾಣಾನಾಯಮ್ಯ, ದೇಶಕಾಲೌ ಸ್ಮೃತ್ವಾ, ದೇವಪ್ರತಿಷ್ಠಾಂಗತ್ವೇನ ಪ್ರಧಾನಾಧಿಪ್ರತ್ಯಧಿದೇವತಾಃ ಅಂಗತತ್ತ್ವಕಲಾದೇವತಾಶ್ಚ ಕಲಶೇಷ್ವಾವಾಹಯಾಮಿ ಇತಿ ಸಂಕಲ್ಪ್ಯ, ವೇದ್ಯುಪರಿ ದ್ರೋಣದ್ವಯ ಪರಿಮಿತಂ ಧಾನ್ಯಂ ಪ್ರಸಾರ್ಯ, ತದುಪರಿ ತದರ್ಧಂ ತಿಲಾನ್ನಿಕ್ಷಿಪ್ಯ, ತದುಪರಿ ತದರ್ಧಂ ತಂಡುಲಾನ್ನಿಕ್ಷಿಪ್ಯ, ಹಿರಣ್ಯಶಲಾಕಯಾ ಪ್ರಾಗಾಯತಾ ಉದಕ್ಸಂಸ್ಥಾಃ ಉದಗಾಯತಾಃ ಪ್ರಾಕ್ಸಂಸ್ಥಾಃ ದಶರೇಖಾಃ ಕೃತ್ವಾ, ತೇಷು ಏಕಾಶೀತಿ ಚತುರಶ್ರೇಷು ಮಧ್ಯಮಂ ಪ್ರಧಾನಂ ಕಲಶಂ ಹಸ್ತಮಾತ್ರೋನ್ನತಂ ಕೃತ್ವಾ, ಶೇಷೇಷುಯಥಾಕ್ರಮಂ ಅಶೀತಿ ಕಲಶಾನ್ ಸಂಸ್ಥಾಪ್ಯ ಅದ್ಭಿ ರಾಪೂರ್ಯ, ದೇವತಾ ಆವಾಹಯೇತ್ ॥

ಕಲಶಸ್ಥಾಪನಂ ಇದಂ ತು ಸಾಮಾನ್ಯ ಪರ್ಯಾಯಂ। ವಿಶೇಷ ಪರ್ಯಾಯೇ ತಂಡುಲೇಷು ಪ್ರಾಗಾಯತಾ ಉದಕ್ಸಂಸ್ಥಾಃ ಉದಗಾಯತಾಃ ಪ್ರಾಕ್ಸಂಸ್ಥಾಃ ಚತುಸ್ತ್ರಿಂಶತಿ ರೇಖಾಃ ಕೃತ್ವಾ, ತೇಷು ನವಾಶೀತ್ಯುತ್ತರಸಹಸ್ರಚತುರಶ್ರೇಷು ಮಧ್ಯಮಂ ಪ್ರಧಾನಕಲಶಂ ದ್ವಿಹಸ್ತಮಾತ್ರೋನ್ನತಂ ಕೃತ್ವಾ, ತತ್ಪರಿತಃ ಅಶೀತಿ ಕಲಶಾನ್ ಹಸ್ತಮಾತ್ರೋನ್ನತಂ ಕೃತ್ವಾ, ಶೇಷೇಷು ಅಷ್ಟೋತ್ತರಸಹಸ್ರಕಲಶಾನ್ ಯಥಾಕ್ರಮಂ ಸಂಸ್ಥಾಪ್ಯ ಅದ್ಭಿರಾಪೂರ್ಯ, ದೇವತಾ ಆವಾಹಯೇತ್ ॥

ಅನಂತರ ಪ್ರಧಾನದೇವತೆ ಅಧಿ ಪ್ರತ್ಯಧಿ ಅಂಗ ತತ್ವ ಕಲಾ ದೇವತೆಗಳ ಕಲಶಗಳನ್ನು ಸ್ಥಾಪಿಸಬೇಕು. ಕಲಶಗಳನ್ನು ಸ್ಥಾಪಿಸಿ ಅವುಗಳಲ್ಲಿ ದೇವತೆಗಳನ್ನು ಆವಾಹಿಸುತ್ತೇನೆ ಎಂದು ಸಂಕಲ್ಪಿಸಿ, ಕಲಶಸ್ಥಾಪನ ವೇದಿಕೆಯಲ್ಲಿ ಬಾಳೆಎಲೆಗಳನ್ನು ಹಾಸಿ, ಎರಡು ಕೊಳಗ ಭತ್ತವನ್ನು ಹರಡಿ, ಅದರ ಮೇಲೆ ಬಾಳೆಎಲೆಗಳನ್ನು ಹಾಸಿ, ಅದರರ್ಧ ಎಳ್ಳನ್ನೂ, ಪುನಃ ಬಾಳೆಎಲೆ ಹಾಸಿ ಅದರರ್ಧ ಅಕ್ಕಿಯನ್ನೂ ಹರಡಿ, ಪೂರ್ವ ಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ಹತ್ತು ಹತ್ತು ರೇಖೆಗಳನ್ನು ಎಳೆದು, ಎಂಭತ್ತೊಂದು ಮನೆಗಳು ಬರುವಂತೆ ಮಾಡಿ, ಮಧ್ಯದಲ್ಲಿ ಪ್ರಧಾನ ಕಲಶವನ್ನು ಒಂದು ಹಸ್ತಪ್ರಮಾಣ ಎತ್ತರವಾಗಿರಿಸಿ ಮಿಕ್ಕವುಗಳಲ್ಲಿ ಎಂಭತ್ತು ಕಲಶಗಳನ್ನು ಇರಿಸಿ, ನೀರಿನಿಂದ ತುಂಬಿ, ದೇವತೆಗಳನ್ನು ಆವಾಹಿಸಬೇಕು. ಇದು ಸಾಮಾನ್ಯ ಪರ್ಯಾಯ. ವಿಶೇಷ ಪರ್ಯಾಯದಲ್ಲಿ ಅಕ್ಕಿಯ ಮೇಲೆ ಮೂವತ್ನಾಲ್ಕು ಗೆರೆಗಳನ್ನು ಪೂರ್ವೋತ್ತರವಾಗಿಯೂ ದಕ್ಷಿಣೋತ್ತರವಾಗಿಯೂ ಬರೆದು ಒಂದುಸಾವಿರದ ಎಂಭತ್ತೊಂಭತ್ತು ಮನೆಗಳು ಬರುವಂತೆ ಮಾಡಿ, ಮಧ್ಯದಲ್ಲಿ ಪ್ರಧಾನ ಕಲಶವನ್ನು ಎರಡು ಹಸ್ತ ಪ್ರಮಾಣ ಎತ್ತರವಾಗಿರಿಸಿ, ಅದರ ಸುತ್ತಲೂ ಎಂಭತ್ತು ಕಲಶಗಳನ್ನು ಒಂದು ಹಸ ಪ್ರಮಾಣ ಎತ್ತರವಾಗಿಇಟ್ಟು, ಅದರ ಸುತ್ತಲೂ ಒಂದುಸಾವಿರದ ಎಂಟು ಕಲಶಗಳನ್ನಿರಿಸಿ, ನೀರಿನಿಂದ ತುಂಬಿ ದೇವತೆಗಳನ್ನು ಆವಾಹಿಸಬೇಕು.

## ವಾಸ್ತ್ವಂಗಕಲಾತತ್ವದೇವತಾನಾಂ ಪೂಜಾ

ತತ್ರ ಮಧ್ಯಮೇ ಪ್ರಧಾನದೇವತಾಂ ಅರ್ಚಾಮೂರ್ತಿರೂಪಂ ದೇವಂ, ತತ್ಪರಿತಃ ಪ್ರಾಗಾದಿ ಪ್ರದಕ್ಷಿಣಕ್ರಮೇಣ ಪ್ರಜಾಪತಿಂ, ಹಿರಣ್ಯಗರ್ಭಂ, ವಿಷ್ಣುಂ, ಸದಾಶಿವಂ, ಕ್ಷೇತ್ರಪಾಲಂ, ವಿನಾಯಕಂ, ಶಕ್ತಿಮಂತಂ, ಮೃತ್ಯುಂಜಯಂಚ, ತತ್ಪರಿತಃ ಪ್ರಾಗಾದಿ ಪ್ರಾದಕ್ಷಿಣ್ಯೇನ ಜೀವಕಲಾಂ, ರಾಗಕಲಾಂ, ಮಾಯಾಕಲಾಂ, ಶಕ್ತಿಕಲಾಂ, ವಿದ್ಯಾಕಲಾಂ, ಗಾನಕಲಾಂ, ನೀತಿಕಲಾಂ, ವಿಜ್ಞಾನಕಲಾಂ, ಪ್ರಕೃತಿಕಲಾಂ, ಅವ್ಯಕ್ತಕಲಾಂ, ಆಧಾರಕಲಾಂ, ಸೂಕ್ಷ್ಮಕಲಾಂ, ಪರಾಕಲಾಂ, ಆನಂದಕಲಾಂ, ಆತ್ಮಕಲಾಂ. ಪರಮಾತ್ಮಕಲಾಂಚ, ತತ್ಪರಿತಃ ತೇನೈವ ಕ್ರಮೇಣ ಮನುಂ, ಮಯಂ, ತ್ವಷ್ಟಾರಂ, ಶಿಲ್ಪಿನಂ, ವಿಶ್ವಜ್ಞಂ, ಮರೀಚಿಂ, ಅತ್ರಿಂ, ಅಂಗಿರಸಂ, ಪುಲಸ್ತ್ಯಂ, ಪುಲಹಂ, ಪೌಲಸ್ತ್ಯಂ, ಕಶ್ಯಪಂ, ದಕ್ಷಂ, ಗುರುಂ, ಸದ್ಯೋಜಾತಂ, ವಾಮದೇವಂ, ಅಘೋರಂ, ತತ್ಪುರುಷಂ, ಈಶಾನಂ, ಬ್ರಹ್ಮಾಣಂ, ಹರಿಂ, ಈಶ್ವರಂ, ಇಂದ್ರಂ, ಆದಿತ್ಯಂಚ, ತತ್ಪರಿತಃ ತೇನೈವ ಕ್ರಮೇಣ ಪ್ರಕೃತಿತತ್ವಂ, ಬುದ್ಧಿತತ್ವಂ, ಅಹಂಕಾರತತ್ವಂ, ಮನಸ್ತತ್ವಂ, ಪೃಥಿವೀತತ್ವಂ, ಅಪ್ತತ್ವಂ, ತೇಜಸ್ತತ್ವಂ, ವಾಯುತತ್ವಂ, ಆಕಾಶತತ್ವಂ, ಶಬ್ದತತ್ವಂ, ಸ್ಪರ್ಶತತ್ವಂ, ರೂಪತತ್ವಂ, ರಸತತ್ವಂ, ಗಂಧತತ್ವಂ, ಶ್ರೋತ್ರತತ್ವಂ, ತ್ವಕ್ತತ್ವಂ, ಚಕ್ಷುಸ್ತತ್ವಂ, ಜಿಹ್ವಾತತ್ವಂ, ಘ್ರಾಣತತ್ವಂ, ವಾಕ್ತತ್ವಂ, ಪಾಣಿತತ್ವಂ, ಪಾದತತ್ವಂ, ಪಾಯುತತ್ವಂ, ಉಪಸ್ಥತತ್ವಂ, ಪ್ರಾಣತತ್ವಂ, ಅಪಾನತತ್ವಂ, ವ್ಯಾನತತ್ವಂ, ಉದಾನತತ್ವಂ, ಸಮಾನತತ್ವಂ, ಸತ್ತತ್ವಂ, ರಜಸ್ತತ್ವಂ, ತಮಸ್ತತ್ವಂ ಚೇತಿ ಏಕಾಶೀತಿ ದೇವತಾ ಆವಾಹ್ಯ, ದಕ್ಷಿಣೋತ್ತರಯೋಃ ಅಧಿದೇವತಾಪ್ರತ್ಯಧಿದೇವತೇ ಆವಾಹ್ಯ, ಶ್ವೇತಸೂತ್ರೇಣಾವೇಷ್ಟ್ಯ ಕಲಶೇಷು ಹಿರಣ್ಯಾನಿ, ಹಿರಣ್ಯಪ್ರತಿಮಾಶ್ಚ ನಿಕ್ಷಿಪ್ಯ, ಚೂತಪಲ್ಲವ ನಾರಿಕೇಳಫಲಾನಿ ನಿಕ್ಷಿಪ್ಯ, ವಸ್ತ್ರಾಣ್ಯಾಚ್ಛಾದಯೇತ್ । ಅಯಂ ಕ್ರಮಸ್ತು ಸಾಮಾನ್ಯ ಪರ್ಯಾಯೇ । ರಾಜಾದಯಃ ರಾಷ್ಟ್ರಕ್ಷೇಮಾಭಿವೃದ್ಧ್ಯರ್ಥಂ ದೇವಾಲಯ ದೇವತಾ ಪ್ರತಿಷ್ಠಾಪನಂ ಕಾರಯೇಯುಸ್ತದಾ ನವಾಶೀತ್ಯುತ್ತರ ಸಹಸ್ರಸಂಖ್ಯಾಕಾನ್ ಕಲಶಾನ್ ಸಂಸ್ಥಾಪ್ಯ, ತೇಷು ಯಥಾಕ್ರಮಂ ಪೂರ್ವೋಕ್ತವತ್ ಏಕಾಶೀತಿದೇವತಾಃ, ತತ್ಪರಿತಃ ತೇನೈವ ಕ್ರಮೇಣ ಯುಗಾದಿದೇವತಾಃ ಸಪ್ತಮಾತೃಕಾಃ ಅಷ್ಟವಸವಃ ಅಷ್ಟನಿಧಯಃ ದ್ವಾದಶಾದಿತ್ಯಾಃ, ತತ್ಪರಿತಃ ಷಡೃತವಃ ಅಷ್ಟಸಂಪದಃ ದಶದಿಗಧಿಪತಯಃ ದ್ವಾದಶರಾಶಯಃ ದ್ವಾದಶಮಾಸಾಃ, ತತ್ಪರಿತಃ ಸಪ್ತವಾರದೇವತಾಃ ಷೋಡಶ ತಿಥಿದೇವತಾಃ ಅಷ್ಟಾವಿಂಶತಿನಕ್ಷತ್ರದೇವತಾಃ ಪಂಚಾಗ್ನಯಃ, ತತ್ಪರಿತಃ ಅಷ್ಟಾವಿಂಶತಿಯೋಗದೇವತಾಃ ಏಕಾದಶ ಕರಣದೇವತಾಃ ಚತುರ್ದಶಲೋಕಾಧಿ ದೇವತಾಃ, ಏಕಾದಶರುದ್ರಾಃ, ತತ್ಪರಿತಃ ಷಷ್ಟಿಸಂವತ್ಸರದೇವತಾಃ ದ್ವೇ ಅಹೋರಾತ್ರೇ ದೇವತೇ ದಶಾವತಾರಾಃ, ತತ್ಪರಿತಃ

ಚತುರ್ದಶ ಮನ್ವಂತರದೇವತಾಃ ಚತುರ್ಯುಗದೇವತಾಃ ಅಸ್ತೋದಯಕಾಲ ದೇವತೇ ಷಷ್ಟಿಘಟಿಕಾದೇವತಾಃ, ತತ್ಪರಿತಃ ದ್ವಾತ್ರಿಂಶತಿ ಮಹಾನದ್ಯಃ ಷಟ್ಪಂಚಾಶದ್ದೇಶಾಃ, ತತ್ಪರಿತಃ ಷಣ್ಣವತಿ ಶಕ್ತಿಗಣದೇವತಾಃ, ತತ್ಪರಿತಃ ಚತುರುತ್ತರಶತಬ್ರಹ್ಮಗಣದೇವತಾಃ, ತತ್ಪರಿತಃ ದ್ವಾದಶೋತ್ತರಶತ ವಿಷ್ಣುಗಣದೇವತಾಃ, ತತ್ಪರಿತಃ ವಿಂಶತ್ಯುತ್ತರಶತ ರುದ್ರಗಣದೇವತಾಃ, ತತ್ಪರಿತಃ ಅಷ್ಟಾವಿಂಶತ್ಯುತ್ತರಶತ ವೇದಗಣದೇವತಾಃ ಆವಾಹ್ಯ, ದಕ್ಷಿಣೋತ್ತರಯೋಃ ಅಧಿದೇವತಾಪ್ರತ್ಯಧಿದೇವತೇ ಆವಾಹಯೇತ್ । ತಾಂ ಕಲಶಾಂ

ದಶತೇ ಕಲಶಾನಾಂ ಹಿರಣ್ಯಾನಾ ಮಧೀಮಹಿ । ಭೂರಿದಾ ಅಸಿ ವೃತ್ರಹನ್ ।

ಆ ಕಲಶೇಷು ಧಾವತಿ ಪವಿತ್ರೇ ಪರಿಷಿಚ್ಯತೇ । ಉಕ್ಥೈರ್ಯಜ್ಞೇಷು

ವರ್ಧತೇ ॥ ಪುನಾನಃ ಕಲಶೇಷ್ವಾ ವಸ್ತ್ರಾಣ್ಯರುಷೋ ಹರಿಃ । ಪರಿಗವ್ಯಾ

ನ್ಯವ್ಯತ ॥ ಯಸ್ಸೋಮಃ ಕಲಶೇಷ್ವಾ ಅಂತಃ ಪವಿತ್ರ ಆಹಿತಃ । ತ

ಮಿಂದುಃ ಪರಿಷಸ್ವಜೇ ॥

ಇತಿ ಕಲಶಾನಭಿಮಂತ್ರ್ಯ, ಪುರುಷಸೂಕ್ತೇನ ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಃ ಕುರ್ಯಾತ್ ॥

ಆ ಕಲಶಗಳಲ್ಲಿ ಮಧ್ಯದಲ್ಲಿ ಅರ್ಚಾಮೂರ್ತಿಯಾದ ಪ್ರಧಾನದೇವತೆಯನ್ನೂ, ಅದರ ಸುತ್ತಲೂ ಪ್ರಜಾಪತಿ ಮೊದಲಾದ ಎಂಟು ದೇವತೆಗಳನ್ನೂ, ಅದರ ಸುತ್ತಲೂ ಜೀವಕಲಾದಿ ೧೬ ಕಲೆಗಳನ್ನೂ, ಅದರ ಸುತ್ತಲೂ ಮನ್ವಾದಿ ೨೮ ದೇವತೆಗಳನ್ನೂ, ಹೀಗೆ ಪ್ರಕೃತಿ ತತ್ವಾದಿ ೨೮ ದೇವತೆಗಳನ್ನೂ ಹೀಗೆ ಕ್ರಮವಾಗಿ ೮೧ ದೇವತೆಗಳನ್ನೂ, ಒಟ್ಟು ಕಲಶಗಳ ದಕ್ಷಿಣೋತ್ತರ ಭಾಗಗಳಲ್ಲಿ ಅಧಿದೇವತೆ ಪ್ರತ್ಯಧಿದೇವತೆಗಳನ್ನೂ ಆವಾಹಿಸಬೇಕು. ಮಹಾರಾಜರೇ ಮೊದಲಾದವರು ರಾಷ್ಟ್ರ ಕ್ಷೇಮಾಭಿವೃದ್ಧಿಗಾಗಿ ಮಾಡುವ ದೇವಾಲಯ ದೇವತಾ ಪ್ರತಿಷ್ಠಾದಿಗಳಲ್ಲಿ ಪೂರ್ವೋಕ್ತ ವಿಶೇಷ ಪರ್ಯಾಯವಾಗಿ ೧೦೮೯ ಕಲಶಗಳಲ್ಲಿ ದೇವತೆಗಳನ್ನು ಆವಾಹಿಸಬೇಕು. ಮೇಲೆ ಹೇಳಿದಂತೆ ೮೧ ದೇವತೆಗಳನ್ನು ಆವಾಹಿಸಿದ ನಂತರ ಮಿಕ್ಕ ೧೦೦೮ ದೇವತೆಗಳನ್ನು ಮೇಲಿನ ಕ್ರಮದಂತೆ ಅದರ ಸುತ್ತಲೂ ಋಗಾದಿ ದೇವತೆಗಳು ಸಪ್ತಮಾತೃಕೆಯರು ಅಷ್ಟವಸು ಅಷ್ಟನಿಧಿ ದ್ವಾದಶಾದಿತ್ಯರು, ಷಡೃತು ಅಷ್ಟ ಸಂಪತ್ತು ದಶದಿಕ್ಪಾಲಕರು ದ್ವಾದಶ ರಾಶಿಗಳು ದ್ವಾದಶ ಮಾಸಗಳೂ ಏಳು ವಾರಗಳು ೧೬ ತಿಥಿಗಳೂ ೨೮ ನಕ್ಷತ್ರಗಳೂ ೫ ಅಗ್ನಿಗಳೂ, ೨೮ ಯೋಗಗಳು ೧೧ ಕರಣಗಳು ೧೪ ಲೋಕಗಳು ೧೧ ರುದ್ರರೂ, ೬೦ ಸಂವತ್ಸರಗಳು ಅಹೋರಾತ್ರಿಗಳು ೧೦ ಅವತಾರಗಳೂ ೧೪ ಮನ್ವಂತರಗಳು ೪ ಯುಗಗಳು ಅಸ್ತೋದಯ ಕಾಲಗಳು ೬೦ ಘಟಿಕೆಗಳೂ, ೩೨ ಮಹಾನದಿಗಳು ೫೬ ದೇಶಗಳೂ, ೯೬ ಶಕ್ತಿಗಣ ದೇವತೆಗಳೂ, ೧೦೪ ಬ್ರಹ್ಮಗಣ ದೇವತೆಗಳೂ, ೧೧೨ ವಿಷ್ಣುಗಣ ದೇವತೆಗಳೂ, ೧೨೦ ರುದ್ರಗಣ ದೇವತೆಗಳೂ, ೧೨೮ ವೇದಗಣ

ದೇವತೆಗಳೂ, ಹೀಗೆ ಕ್ರಮವಾಗಿ ಆವಾಹಿಸಿ, ಒಟ್ಟು ಕಲಶಗಳ ದಕ್ಷಿಣೋತ್ತರ ಭಾಗಗಳಲ್ಲಿ ಅಧಿದೇವತೆ ಪ್ರತ್ಯಧಿದೇವತೆಗಳನ್ನೂ ಆವಾಹಿಸಿ, ದಶತೇ ಮಂತ್ರದಿಂದ ಅಭಿಮಂತ್ರಿಸಿ, ಪುರುಷ ಸೂಕ್ತದಿಂದ ಷೋಡಶೋಪಚಾರ ಪೂಜೆ ಮಾಡಬೇಕು.

ನೈರುತ್ಯವೇದ್ಯಾಂ ವ್ರೀಹಿರಾಶಿಂ ನಿಕ್ಷಿಪ್ಯ, ತಸ್ಮಿನ್ ಚತುರಃ ಕುಂಭಾನ್ ಸಂಸ್ಥಾಪ್ಯ ತೇಷು ವಾಸ್ತುಪುರುಷಮಾವಾಹಯೇತ್ । ಗೃಹವೇದಿಕಾಯಾಂ ನವ ಗ್ರಹಾನ್, ಅಷ್ಟದಿಕ್ಪಾಲಕಾನ್, ಕೃತ್ತಿಕಾದಿ ನಕ್ಷತ್ರಾಣಿ, ಕರ್ಮಸಾದ್ಗುಣ್ಯ ದೇವತಾಶ್ಚ ಆವಾಹಯೇತ್ । ಪ್ರಧಾನವೇದಿಕಾಯಾಃ ಪೂರ್ವಭಾಗೇ ವೇದ್ಯಾಂ ಕುಂಭ ಪಂಚಕಂ ನಿಕ್ಷಿಪ್ಯ, ತೇಷು ಪ್ರತಿಷ್ಠಾಕರ್ಮಾಧಿಪತಿಂ ಪ್ರತಿಷ್ಠಾಕರ್ಮಸಂರಕ್ಷಕಂ ಶ್ರೀ ವಿಶ್ವಕರ್ಮಾಣಂ ಆವಾಹ್ಯ, ಸರ್ವಾದೇವತಾಃ ತತ್ತನ್ಮಂತ್ರೈಃ ಧ್ಯಾನಾದಿ ಪೂಜಾ ಜಪಂಚ ಕುರ್ಯಾತ್ ॥

ಯೇದೇವಾ ದೇವದೇವಸ್ಯ ಕಲಾ ತತ್ತ್ವಾಂಗ ಮೂರ್ತಯಃ ।
ತೇ ಸರ್ವೇ ತೃಪ್ತಿಮಾಯಾಂತು ಪೂಜಾಸ್ತೋತ್ರೈಶ್ಚ ಸರ್ವಶಃ ॥
ಕಲಾತತ್ತ್ವಾಂಗದೇವಾಶ್ಚ ವಾಸ್ತುದೇವಶ್ಚ ಸರ್ವಶಃ ।
ಅಸ್ಯಾಂ ಮೂರ್ತಾವತಿಷ್ಠಂತು ಆಯುರ್ಬಲಕರಾ ಸ್ಸದಾ ॥

ಇತಿ ಕಲಶಾನ್ ನಮಸ್ಕೃತ್ವಾ, ಅಷ್ಟ ದಿಕ್ಷು

ಯಾನೀಹ ಭೂತಾನಿ ವಸಂತಿತಾನಿ ಬಲಿಂ ಗೃಹೀತ್ವಾ ವಿಧಿವತ್ಪ್ರಯುಕ್ತಂ ।
ಅನ್ಯತ್ರ ವಾಸಃ ಪರಿಕಲ್ಪಯಂತು ನಮೋಸ್ತು ತೇಭ್ಯ ಸ್ಸಕಲಗ್ರಹೇಭ್ಯಃ ॥

ಇತಿ ಬಲಿಂ ದತ್ವಾ, ಅಕ್ಷತೋದಕಂ ವಿಸೃಜ್ಯ, ಯಸ್ಯಸ್ಮೃತ್ಯೇತಿ ತತ್ಕರ್ಮ ಭಗವತೇ ವಿಶ್ವಕರ್ಮಣೇ ಸಮರ್ಪಯೇತ್ ॥

ಪ್ರಧಾನ ವೇದಿಕೆಯಲ್ಲಿ ಕಳಶಸ್ಥಾಪನೆ ಮಾಡಿದ ನಂತರ ನೈರುತ್ಯ ವೇದಿಕೆಯಲ್ಲಿ ಭತ್ತ ವನ್ನು ಹರಡಿ ೪ ಕುಂಭಗಳನ್ನು ಇಟ್ಟು ವಾಸ್ತುಪುರುಷನನ್ನು ಆವಾಹಿಸಬೇಕು. ಗ್ರಹವೇದಿಕೆ ಯಲ್ಲಿ ನವಗ್ರಹಗಳನ್ನೂ ಅಷ್ಟದಿಕ್ಪಾಲಕರನ್ನೂ ಕೃತ್ತಿಕಾದಿ ನಕ್ಷತ್ರಗಳನ್ನೂ ದುರ್ಗಾದಿ ದೇವತೆಗಳನ್ನೂ ಆವಾಹಿಸಬೇಕು. ಪ್ರಧಾನ ವೇದಿಕೆಯ ಪೂರ್ವಭಾಗದ ವೇದಿಕೆಯಲ್ಲಿ ೫ಂ ಕುಂಭಗಳನ್ನು ಇಟ್ಟು ಪ್ರತಿಷ್ಠಾಕರ್ಮಾಧಿಪತಿಯೂ ಸಂರಕ್ಷಕನೂ ಆದ ಶ್ರೀ ವಿಶ್ವ ಕರ್ಮನನ್ನು ಆವಾಹಿಸಿ, ಎಲ್ಲಾ ದೇವತೆಗಳನ್ನೂ ಆಯಾ ಮಂತ್ರಗಳಿಂದ ಪೂಜೆಮಾಡ ಬೇಕು. ನಮಸ್ಕರಿಸಿ, ಎಂಟು ದಿಕ್ಕುಗಳಲ್ಲಿಯೂ ಬಲಿಯನ್ನವನ್ನು ಹಾಕಿ ಅಕ್ಷತೋದಕ ವನ್ನು ಬಿಡಬೇಕು.

## ವಾಸ್ತುಹೋಮಃ ಗ್ರಹಯಜ್ಞಾದಯಃ

ತತಃ ಸಮಸ್ತದೇವತಾಪರಿಗ್ರಹಾರ್ಥಂ ಅಗ್ನಿಂ ಪ್ರತಿಷ್ಠಾಪ್ಯ, ವಾಸ್ತು ಹೋಮ ಮೂರ್ತಿಹೋಮ ವೈಶ್ವಕರ್ಮಣಹೋಮಾದೀಂಶ್ಚ ಕುರ್ಯಾತ್ । ತತ್ರ ಅಗ್ನಿಂ ಸ್ಥಂಡಿಲೇ ಪ್ರತಿಷ್ಠಾಪ್ಯ, ಪರಿಸ್ತೀರ್ಯ, ದ್ವಾದಶಪಾತ್ರಪ್ರಯೋಗವಿಧಿನಾ ಪಾತ್ರಸಂಸ್ಕಾರಾನ್ ಕೃತ್ವಾ, ಸಂಸ್ಕೃತೈಃ ಪಾಯಸಚರ್ವಾಜ್ಯೈಃ ವಾಸ್ತೋಷ್ಪತೇ

ಪ್ರತಿಜಾನೀ ವಾಸ್ತೋಷ್ಪತೇಶಗ್ಮಯಾ ವಾಸ್ತೋಷ್ಪತೇ ಪ್ರತರಣೋ. ಅಮೀವಹಾ ವಾಸ್ತೋಷ್ಪತೇ ಇತಿ ಚತುರ್ಭಿರ್ಮಂತ್ರೈಃ ಹುತ್ವಾ, ನವಗ್ರಹ ಲೋಕಪಾಲಕ ನಕ್ಷತ್ರ ಕರ್ಮಸಾದ್ಗುಣ್ಯ ದೇವತಾಶ್ಚ ತತ್ತನ್ಮಂತ್ರೈಃ ಹುತ್ವಾ, ವಿಶ್ವಕರ್ಮ ಸೂಕ್ತೇನ ಪ್ರತಿಮಂತ್ರಂ ಷೋಡಶಾಜ್ಯಾಹುತೀ ರ್ಹುತ್ವಾ, ಶ್ಯೇನಾಯಪತ್ವನೇ ಸ್ವಾಹೇತಿ ಏಕವಿಂಶತಿಮಂತ್ರೈಃ ರೋಹಿತೋಯಜ್ಞಮಿತಿ ಚತುರ್ಭಿರ್ಮಂತ್ರೈಃ ಪಂಚವಿಂಶತ್ಯಾಹುತೀ ರ್ಹುತ್ವಾ, ಇಹತ್ವಷ್ಟಾರಮಗ್ರಿಯಮಿತಿ ಪಂಚವಿಂಶತ್ಯಾಹುತೀಶ್ಚ ಜುಹುಯಾತ್ ॥

ಸ್ಥಂಡಿಲದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ, ದ್ವಾದಶಪಾತ್ರ ಪ್ರಯೋಗವಿಧಿಯಿಂದ ಪಾತ್ರಸಾಧನ ಮಾಡಿ, ಸಂಸ್ಕರಿಸಿದ ಪಾಯಸ ಚರು ಆಜ್ಯಗಳಿಂದ ವಾಸ್ತುಹೋಮ ಗ್ರಹ ನಕ್ಷತ್ರಾದಿ ಹೋಮಗಳನ್ನೂ ವಿಶ್ವಕರ್ಮ ಸೂಕ್ತದಿಂದ ವೈಶ್ವಕರ್ಮಣ ಹೋಮವನ್ನೂ ಶ್ಯೇನಾಯಪತ್ವನೇ ರೋಹಿತೋಯಜ್ಞಂ ಇಹತ್ವಷ್ಟಾರಂ ಇತ್ಯಾದಿ ಮಂತ್ರಗಳಿಂದ ಆಯಾ ಹೋಮಗಳನ್ನೂ ಮಾಡಬೇಕು.

## ಪ್ರಧಾನಹೋಮಃ ತತ್ತ್ವನ್ಯಾಸಹೋಮಶ್ಚ

ತತಃ ತಿಲಾದಿಧಾನ್ಯ ಪಾಯಸ ಪುರೋಡಾಶ ಚರ್ವಾಜ್ಯೈಃ ಪ್ರಧಾನ ದೇವತಾಂ ಅಧಿದೇವತಾ ಪ್ರತ್ಯಧಿದೇವತೇಚ ಅಷ್ಟೋತ್ತರಸಹಸ್ರಂ ಅಷ್ಟೋತ್ತರ ಶತಂ ಅಷ್ಟಾವಿಂಶತಿರ್ವಾ ಹುತ್ವಾ, ತತ್ವನ್ಯಾಸಹೋಮಂ ಕುರ್ಯಾತ್ । ಯಥಾ ಪ್ರಧಾನದೇವತಾಂ ಆದಿತ್ಯಂ ಹಿರಣ್ಯಗರ್ಭಂ ವಿಷ್ಣುಂ ಸದಾಶಿವಂ ಕ್ಷೇತ್ರಪಾಲಂ ವಿನಾಯಕಂ ಶಕ್ತಿಮಂತಂ ಮೃತ್ಯುಂಜಯಂ, ತತಃ ಜೀವಕಲಾಂ ರಾಗಕಲಾಂ ಮಾಯಾಕಲಾಂ ಶಕ್ತಿಕಲಾಂ ವಿದ್ಯಾಕಲಾಂ ಗಾನಕಲಾಂ ನೀತಿಕಲಾಂ ವಿಜ್ಞಾನ ಕಲಾಂ ಪ್ರಕೃತಿಕಲಾಂ ಅವ್ಯಕ್ತಕಲಾಂ ಆಧಾರಕಲಾಂ ಸೂಕ್ಷ್ಮಕಲಾಂ ಪರಾಕಲಾಂ ಆನಂದಕಲಾಂ ಆತ್ಮಕಲಾಂ ಪರಮಾತ್ಮಕಲಾಂಚ, ತತಃ ಮನುಂ ಮಯಂ ತ್ವಷ್ಟಾರಂ ಶಿಲ್ಪಿನಂ ವಿಶ್ವಜ್ಞಂ ಮರೀಚಿಂ ಅತ್ರಿಂ ಆಂಗಿರಸಂ ಪುಲಸ್ತ್ಯಂ ಪುಲಹಂ ಪೌಲಸ್ತ್ಯಂ ಕಶ್ಯಪಂ ದಕ್ಷಂ ಗುರುಂ ಸದ್ಯೋಜಾತಂ ವಾಮದೇವಂ ಅಘೋರಂ ತತ್ಪುರುಷಂ ಈಶಾನಂ ಬ್ರಹ್ಮಾಣಂ ಹರಿಂ ಈಶ್ವರಂ ಇಂದ್ರಂ ಆದಿತ್ಯಂಚ, ತತಃ ಪ್ರಕೃತಿತತ್ವಂ ಬುದ್ಧಿತತ್ವಂ ಅಹಂಕಾರತತ್ವಂ ಮನಸ್ತತ್ವಂ ಪೃಥ್ವೀತತ್ವಂ ಅಪ್ತತ್ವಂ ತೇಜಸ್ತತ್ವಂ ವಾಯುತತ್ವಂ ಆಕಾಶತತ್ವಂ ಶಬ್ದತತ್ವಂ ಸ್ಪರ್ಶತತ್ವಂ ರೂಪ ತತ್ವಂ ರಸತತ್ವಂ ಗಂಧತತ್ವಂ ಶ್ರೋತ್ರತತ್ವಂ ತ್ವಕ್ತತ್ವಂ ಚಕ್ಷುಸ್ತತ್ವಂ ಜಿಹ್ವಾತತ್ವಂ ಘ್ರಾಣತತ್ವಂ ವಾಕ್ತತ್ವಂ ಪಾಣಿತತ್ವಂ ಪಾದತತ್ವಂ ಪಾಯುತತ್ವಂ ಉಪಸ್ಥತತ್ವಂ ಪ್ರಾಣತತ್ವಂ ಅಪಾನತತ್ವಂ ವ್ಯಾನತತ್ವಂ ಉದಾನತತ್ವಂ ಸಮಾನತತ್ವಂ ಸತ್ವತತ್ವಂ ರಜಸ್ತತ್ವಂ ತಮಸ್ತತ್ವಂ ಚೇತಿ ಕ್ರಮೇಣ ಏಕಾಶೀತಿ ದೇವತಾಃ ಸಾಮಾನ್ಯ ಪರ್ಯಾಯೇ, ವಿಶೇಷ ಕ್ರಮೇಣ ತತಃ ಯುಗಾದಿದೇವತಾಃ ಸಪ್ತ ಮಾತೃಕಾಃ ಅಷ್ಟ

ವಸವಃ ಅಷ್ಟನಿಧಯಃ ದ್ವಾದಶಾದಿತ್ಯಾಃ, ತತಃ ಷಡೃತವಃ ಅಷ್ಟಸಂಪದಃ ದಶ ದಿಗಧಿಪತಯಃ ದ್ವಾದಶರಾಶಯಃ ದ್ವಾದಶಮಾಸಾಃ, ತತಃ ಸಪ್ತವಾರದೇವತಾಃ ಷೋಡಶತಿಥಿದೇವತಾಃ ಅಷ್ಟಾವಿಂಶತಿನಕ್ಷತ್ರದೇವತಾಃ ಪಂಚಾಗ್ನಯಃ, ತತಃ ಅಷ್ಟಾವಿಂಶತಿಯೋಗದೇವತಾಃ ಏಕಾದಶಕರಣದೇವತಾಃ ಚತುರ್ದಶಲೋಕಾಧಿ ದೇವತಾಃ ಏಕಾದಶರುದ್ರಾಃ, ತತಃ ಷಷ್ಠಿಸಂವತ್ಸರ ದೇವತಾಃ ದ್ವೇ ಅಹೋರಾತ್ರೇ ದೇವತೇ ದಶಾವತಾರಾಃ, ತತಃ ಚರ್ತುದಶಮನ್ವಂತರ ದೇವತಾಃ ಚತುರ್ಯುಗ ದೇವತಾಃ ಅಸ್ತೋದಯಕಾಲ ದೇವತೇ ಷಷ್ಠಿಘಟಿಕಾ ದೇವತಾಃ, ತತಃ ದ್ವಾತ್ರಿಂಶತಿ ಮಹಾನದ್ಯಃ ಷಟ್‌ಪಂಚಾಶದ್ದೇಶಾಃ, ತತಃ ಷಣ್ಣವತಿಶಕ್ತಿಗಣದೇವತಾಃ, ತತಃ ಚತುರುತ್ತರಶತಬ್ರಹ್ಮಗಣದೇವತಾಃ ತತಃ ದ್ವಾದಶಾಷ್ಟೋತ್ತರಶತವಿಷ್ಣುಗಣ ದೇವತಾಃ, ತತಃ ವಿಂಶತ್ಯುತ್ತರಶತರುದ್ರಗಣದೇವತಾಃ, ತತಃ ಅಷ್ಟಾವಿಂಶತ್ಯುತ್ತರಶತವೇದಗಣದೇವತಾಃ ಇತಿ ನವಾಶೀತ್ಯುತ್ತರಸಹಸ್ರದೇವತಾಃ ತತ್ತನ್ಮಂತ್ರೈಃ ನಾಮಭಿರ್ವಾ ಚರುಪಾಯಸವ್ರೀಹಿಪುರೋಡಾಶಾಜ್ಯೈ ರ್ಹುತ್ವಾ, ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಅಗ್ನಿಂ ಷೋಡಶೋಪಚಾರೈಃ ಸಂಪೂಜಯೇತ್ ||

ಎಳ್ಳು ಮೊದಲಾದ ಧಾನ್ಯ ಪಾಯಸ ಪುರೋಡಾಶಗಳೆಂಬ ಅಕ್ಕಿಯಿಂದ ಮಾಡಿದ ಸಣ್ಣ ರೊಟ್ಟಿಗಳು ಚರು ಆಜ್ಯಗಳಿಂದ, ಕಲಶಗಳಲ್ಲಿ ಆವಾಹನೆ ಮಾಡಿರುವ ಆಯಾ ದೇವತೆಗಳನ್ನು ಉದ್ದೇಶಿಸಿ, ಆಯಾ ಮಂತ್ರ ಅಥವಾ ನಾಮಗಳಿಂದ ೮೧ ಅಥವಾ ೧೦೮ ದೇವತೆಗಳಿಗೆ ಆಹುತಿಗಳನ್ನು ಕೊಟ್ಟು, ಹೋಮವನ್ನು ಪೂರ್ಣಗೊಳಿಸಿ ಅಗ್ನಿಗೆ ಷೋಡಶೋಪಚಾರ ಪೂಜೆಮಾಡಬೇಕು.

## ದೇವಾಲಯಾಧಿವಾಸಃ

ಪ್ರಾಸಾದಸ್ಯಾಗ್ರೇ ಏಕಾಶೀತಿಪದಂ ಮಂಡಲಂ ಅಕ್ಷತೈಃ ಕೃತ್ವಾ, ತೇಷು ಪದೇಷು ಜಲಪೂರ್ಣಾ ಏಕಾಶೀತಿ ಕಲಶಾ ಆಹೃತ್ಯ, ಅಷ್ಟದಿಕ್ಷು ಮಧ್ಯೇಚ ನವಕನವಕಾನಿ ಸ್ಥಾಪಯಿತ್ವಾ, ಏಕಸ್ಮಿ ನವಕೇ ನವಕುಂಭಾನ್ನ್ಯಸೇತ್ | ತತ್ರ ಮಧ್ಯಮನವಕೇ ಕುಂಭೇಷು ನವವಿಧಪಲ್ಲವಾ, ಪೂರ್ವತಮನವಕೇ ಕುಂಭೇಷು ನವವಿಧಪುಷ್ಪಾಣಿ, ಆಗ್ನೇಯತಮನವಕೇ ಕುಂಭೇಷು ನವವಿಧಧಾನ್ಯಾನಿ, ದಕ್ಷಿಣನವಕೇ ಕುಂಭೇಷು ನವಮೂಲಾನಿ, ನೈರುತ್ಯನವಕೇ ಕುಂಭೇಷು ನವವಿಧಫಲಾನಿ, ಪಶ್ಚಿಮನವಕೇ ಕುಂಭೇಷು ಪಂಚಗವ್ಯಂ ಕುಶೋದಕಂ ಮಧುಫಲೋದಕಂ ಕದಳೀ ಪಂಚಾಮೃತಂಚ, ವಾಯವ್ಯನವಕೇ ಕುಂಭೇಷು ನವವಿಧತ್ವಚಃ, ಉತ್ತರನವಕೇ ಕುಂಭೇಷು ನವವಿಧಮೃದಃ, ಈಶಾನ್ಯನವಕೇ ಕುಂಭೇಷು ನವರತ್ನಾನಿಚ ನಿಕ್ಷಿಪ್ಯ, ಶ್ರೀಸೂಕ್ತೇನಾಭಿಮಂತ್ರ್ಯ, ಪಲ್ಲವನಾರಿಕೇಳ ವಸ್ತ್ರಹರಿದ್ರಾಕುಂಕುಮ ಸೂತ್ರವೇಷ್ಟನಾದಿಭಿಃ ಅಲಂಕೃತ್ಯ, ಸಪರಿವಾರ ಯುತಾಯ ಶ್ರೀ ವಿಶ್ವಕರ್ಮಣೇನಮಃ ಇತಿ ಧ್ಯಾನಾದಿ ಪೂಜಾಃ ಕೃತ್ವಾ, ಪಂಚಸೂಕ್ತ ಪಾರಾಯಣಂ ಕೃತ್ವಾ, ಮಧ್ಯಮನವಕಕುಂಭೋದಕೈಃ ವಿಶ್ವಕರ್ಮ

ಸೂಕ್ತೇನ ಪ್ರಾಗಾದ್ಯಷ್ಟದಿಙ್ನವಕ ಕುಂಭೋದಕೈಃ ದಿಕ್ಪಾಲಕ ಮಂತ್ರೈಶ್ಚ ಸಗೋಪುರಂ ದೇವಾಲಯಂ ಅಭಿಷಿಂಚೇತ್ ಅಥವಾ ಪ್ರೋಕ್ಷೇತ್ । ದೇವರೂಪಂ ಗೋಪುರಸಮೇತಂ ದೇವಾಲಯಂ ಧ್ಯಾತ್ವಾ, ಪತಾಕಾದಿಭಿಃ ಶೋಭಯಿತ್ವಾ, ಗಂಧಾದಿಭಿಃ ಸಂಪೂಜ್ಯ,

ದೇವಾನ್ವಾವಚ್ಚಕೃವಾ ಕಚ್ಚಿದಾಗಃ ಸಖಾಯಂವಾ ಸದಮಿಜ್ಜಾಸ್ಪತಿಂ ವಾ । ಇಯಂ ಧೀ ಭರ್ಯಾಯೊ ಅವಯಾನಮೇಷಾಂ ದ್ಯಾವಾರಕ್ಷತಂ ಪೃಥಿವೀನೋ ಅಭ್ವಾತ್ ॥ ದೇವಾನಾಂ ಯುಗೇ ಪ್ರಥಮೋ ಸತ ಸ್ಸದ ಜಾಯೆತ । ತದಾಶಾ ಅನ್ವಜಾಯಂತ ತದುತ್ತಾನ ಪದಸ್ಪರಿ ॥ ಸನಾಮಾನಾ ಚಿದ್ಧ್ವಸಯೋ ನ್ಯಸ್ಮಾ ಅವಾಹನ್ನಿಂದ್ರ ಉಷಸೋ ಯಥಾನಃ । ಋಷ್ವೈ ರಗಚ್ಛಃ ಸಖಿಭಿರ್ನಿಕಾಮೈ ಸ್ಸಾಕಂಪ್ರತಿಷ್ಠಾ ಹೃದ್ಯಾ ಜಗಂಥ ॥

ಸರ್ವದೇವಮಯಾಚಿಂತ್ಯ ಸರ್ವರತ್ನೋಜ್ವಲಾಕೃತೇ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ತಾವದತ್ರ ಸ್ಥಿರೋ ಭವ ॥

ಇತಿ ಗೋಪುರಂ ಪ್ರಾರ್ಥ್ಯ ಅಧಿವಾಸಯೇತ್ । ತತಃ ಚತರಸ್ರೋ ಗಾಃ ಗಾಯತ್ರ್ಯಾ ದುಗ್ಧ್ವಾ, ತತ್ಕ್ಷೀರೇ ಗಾಯತ್ರ್ಯಾ ಚರುಂ ಶ್ರಪಯಿತ್ವಾ, ದೇವಾಲಯಾಧಿಪತಯೇ ಶ್ರೀ ವಿಶ್ವಕರ್ಮಣೇ ನಮಃ ಇತಿ ನಿವೇದ್ಯ, ಅನೇನ ಕರ್ಮಣಾ ಶ್ರೀ ವಿಶ್ವಕರ್ಮಾ ಪ್ರೀಯತಾಂ ಇತಿ ವದೇತ್ । ಅಥ ಯಜಮಾನೋ ಬಹಿರ್ನಿರ್ಗತ್ಯ ದೇವಾಲಯಾಭಿಮುಖೋ ಭೂತ್ವಾ, ದೇಶಕಾಲೌ ಸಂಕೀರ್ತ್ಯ, ಅನೇನ ಶಿಲೇಷ್ಟಕಾದಾರ್ವಾದಿನಿರ್ಮಿತಂ ಜಲಭೀ ಜಗತೀ ಪ್ರಾಕಾರ ಗೋಪುರ ದೇವತಾಸಹಿತ ದೇವಾಲಯಾಧಿವಾಸನೇನ ತತ್ತದ್ದೇವತಾಸಮೇತ ವಿಶ್ವೇಶ್ವರ ಸ್ವರೂಪ ಶ್ರೀ ವಿಶ್ವಕರ್ಮಾ ಪ್ರೀಯತಾಂ ಇತಿ ಕುಶಾಕ್ಷತಯುತಂ ಜಲಂ ಕ್ಷಿಪ್ತ್ವಾ ಪ್ರದಕ್ಷಿಣನಮಸ್ಕಾರಂ ಕುರ್ಯಾತ್ ॥

ದೇವಾಲಯದ ಮೇಲ್ಭಾಗದಲ್ಲಿ ಕಲಶಸ್ಥಾಪನೆಯ ಕ್ರಮದಂತೆ ೮೧ ಮಂಡಲಗಳನ್ನು ಬರೆದು, ಅವುಗಳಲ್ಲಿ ಮಧ್ಯಭಾಗದಲ್ಲಿ ೯ ಕಲಶಗಳು ಬರುವಂತೆಯೂ ೮ ದಿಕ್ಕುಗಳಲ್ಲಿ ೯-೯ ಕಲಶಗಳು ಬರುವಂತೆಯೂ ಇಟ್ಟು, ನೀರು ತುಂಬಿ ಮಧ್ಯದ ೯ ಕಲಶಗಳಲ್ಲಿ ೯ ವಿಧ ಚಿಗುರುಗಳು, ಪೂರ್ವದಿಂದ ಕ್ರಮವಾಗಿ ೯ ವಿಧ ಪುಷ್ಪಗಳು, ೯ ಧಾನ್ಯಗಳು, ೯ ಬೇರುಗಳು, ೯ ಫಲಗಳು, ಪಂಚಗವ್ಯ ಕುಶೋದಕ ಮಧುಫಲೋದಕ ಕದಳೀ ಪಂಚಾಮೃತಗಳು, ೯ ವಿಧ ಮರದ ತೊಗಟೆಗಳು, ೯ ವಿಧ ಮೃತ್ತಿಕೆ, ೯ ರತ್ನಗಳು ಹೀಗೆ ಇಟ್ಟು ಶ್ರೀ ಸೂಕ್ತದಿಂದ ಅಭಿಮಂತ್ರಿಸಿ, ಅವುಗಳಲ್ಲಿ ಮಾವಿನಕೊನೆ ತೆಂಗಿನಕಾಯಿ ವಸ್ತ್ರ ಹರಿದ್ರಾಕುಂಕುಮಗಳನ್ನು ಇಟ್ಟು, ಬಿಳಿಯದಾರದಿಂದ ಸುತ್ತಿ, ಶ್ರೀ ವಿಶ್ವಕರ್ಮನನ್ನು

